# ನನ್ನ ಮಾತು

ಇಂಗ್ಲಿಷ್ ಭಾಷೆಯನ್ನು ಅಭ್ಯಾಸ ಮಾಡಿದವರಿಗೆ ಶೇಕ್ಸ್‌ಪಿಯರ್ ಮಹಾಕವಿಯ ಹೆಸರು ಅಪರಿಚಿತವಾದುದೇನೂ ಅಲ್ಲ. ಇಂಗ್ಲಿಷ್ ಸಾಹಿತ್ಯದಲ್ಲಿ ಅವನ ಹೆಸರು ಧ್ರುವತಾರೆಯಂತೆ ವಿರಾಜಿಸುತ್ತಲಿದೆ. ಅವನ ನಾಟಕಗಳು ವಿಶ್ವದ ವಿವಿಧ ಭಾಷೆಗಳಲ್ಲಿ — ವಿವಿಧ ರೂಪಗಳಲ್ಲಿ ಪರಿವರ್ತನೆ ಹೊಂದಿವೆ.

ಶೇಕ್ಸ್‌ಪಿಯರ್ ಮಹಾಕವಿ ಸುಖಾಂತ, ದುಃಖಾಂತ, ಮತ್ತು ಚಾರಿತ್ರಿಕಗಳೆಂಬ ವರ್ಗಗಳಿಗೆ ಸೇರಿದ ಮೂವತ್ತಾರು ನಾಟಕಗಳನ್ನು ಬರೆದಿರುವನು. ಅವನ ಸುಖಾಂತ ನಾಟಕಗಳಲ್ಲಿ 'Winter's Tale' ಎಂಬುದೊಂದು. 'Winter's Tale'ನಲ್ಲಿ ಶೇಕ್ಸ್‌ಪಿಯರ್ ಮಹಾಕವಿ ಮಾನವನ ದೌರ್ಬಲ್ಯಗಳಾದ ಮತ್ಸರ ಮತ್ತು ದ್ವೇಷಗಳ ಭೀಕರ ಚಿತ್ರವನ್ನು ಬಹು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ. 'ಹಾವಿನ ಹುತ್ತ' ಎಂಬ ಈ ಕೃತಿ 'Winter's Tale'ನ ಆಧಾರದ ಮೇಲೆ ವಿರಚಿತವಾಗಿದೆ.

ಅನ್ಯ ಭಾಷೆಯ ಕೃತಿಗಳನ್ನು ಕನ್ನಡಕ್ಕೆ ತರಲು ಎರಡು ಮಾರ್ಗಗಳಿವೆ. ಅವುಗಳಲ್ಲಿ ಮೂಲವನ್ನು ಇದ್ದಂತೆಯೇ ಅನುವಾದಿಸುವುದು ಮೊದಲನೆಯ ಮಾರ್ಗ; ಮೂಲವನ್ನು ಅಭ್ಯಾಸಮಾಡಿ, ನಮ್ಮ ದೇಶ, ಸಮಾಜ ಮತ್ತು ಸಂಸ್ಕೃತಿಗಳಿಗೆ ಸರಿಹೊಂದುವಂತೆ ರೂಪಾಂತರಗೊಳಿಸುವುದು ಎರಡನೆಯ ದಾರಿ. ನಾನು ದ್ವಿತೀಯ ಮಾರ್ಗವನ್ನು ಅವಲಂಬಿಸಿದ್ದೇನೆ. ಈ ಹಾದಿಯನ್ನೇ ಹಿಡಿದು ಶ್ರೀ। ಕುವೆಂಪುರವರು 'ಬಿರುಗಾಳಿ' ಮತ್ತು 'ರಕ್ತಾಕ್ಷಿ'ಗಳನ್ನು ಬರೆದಿರುವರು. ಶ್ರೀ। ಪರ್ವತವಾಣಿಯವರು ಬರೆದ 'ಬಹದ್ದೂರ್ ಗಂಡ', 'ಹಣ ಹದ್ದು' ಮೊದಲಾದ ನಾಟಕಗಳು ದ್ವಿತೀಯ ಮಾರ್ಗಕ್ಕೆ ಸೇರಿದವುಗಳಾಗಿವೆ.

ಶೇಕ್ಸ್‌ಪಿಯರನ 'As you like it'ನ್ನು 'ದೊರೆಮಗಳ' ರೂಪದಲ್ಲಿ ಕನ್ನಡಿಗರ ಮುಂದೆ ಇರಿಸಿದಾಗ ಅದು ಅನೇಕರ ಮೆಚ್ಚುಗೆಗೆ ಪಾತ್ರವಾಯಿತು. ಆ ಮಾರ್ಗವನ್ನು ಕೈಗೊಂಡು, ಶೇಕ್ಸ್‌ಪಿಯರನ ಇತರ ಕೃತಿಗಳನ್ನೂ ಕಥಾರೂಪದಲ್ಲಿ ಕನ್ನಡಕ್ಕೆ ತರಬೇಕೆಂದು ನನ್ನ ಮಿತ್ರರನೇಕರು ಬಯಸಿದರು. 'ದೊರೆಮಗಳ' ಲೇಖನದಲ್ಲಿ ದೊರೆತ ಅನುಭವದ ಭಂಡವಾಳವನ್ನು ಉಪಯೋಗಿಸಿ, 'Winter's Tale'ನ ಕತೆಯನ್ನು ಕನ್ನಡಕ್ಕೆ ರೂಪಾಂತರಗೊಳಿಸುವ ಸಾಹಸಕ್ಕೆ ಕೈಯಿಕ್ಕಿದೆ. ನಮ್ಮ ಸಮಾಜದ ಸಂಸ್ಕೃತಿಗಳಿಗೆ ಸರಿಹೊಂದುವಂತೆ — 'ದೊರೆಮಗಳ'ಲ್ಲಿ ಕೈಗೊಂಡಂತೆ 'ಹಾವಿನ ಹುತ್ತ'ದಲ್ಲಿಯೂ ಅಲ್ಪ ಸ್ವಲ್ಪ ಮಾರ್ಪಾಟುಗಳನ್ನು ಮಾಡಿದ್ದೇನೆ. ಸಹೃದಯರು 'ಹಾವಿನ ಹುತ್ತ'ವನ್ನು ಆದರದಿಂದ ಬರಮಾಡಿಕೊಳ್ಳುವರೆಂಬ ವಿಶ್ವಾಸ ನನಗಿದೆ.

ವೀರರಾಜಪೇಟೆ, (ಕೊಡಗು)
೨—೧೦—೧೯೫೫

ಭಾ. ಸು.

# ಹಾವಿನ ಹುತ್ತ

---

## ಕಥಾಪಾತ್ರಗಳು:

೧ ಸಾಂತಣ್ಣ . . ಹೊನ್ನ ಹಳ್ಳಿಯ ಮಾಂಡಲಿಕ ಅರಸ.
೨ ಹನುಮಣ್ಣ . . ಗಂಗವಳ್ಳಿಯ ಮಾಂಡಲಿಕ ಅರಸ. ಸಾಂತಣ್ಣನ ಬಾಲ್ಯ ಮಿತ್ರ.
೩ ವೀರಣ್ಣ . . ಸಾಂತಣ್ಣನ ಮಂತ್ರಿ ಮತ್ತು ದಂಡನಾಯಕ.
೪. ನೀಲಣ್ಣ . . ಹೊನ್ನ ಹಳ್ಳಿ ಆಸ್ಥಾನದ ಸರದಾರ ಮತ್ತು ಸೇನಾನಿ.
೫ ದುಗ್ಗಪ್ಪ . . ಹೊನ್ನ ಹಳ್ಳಿ ಆಸ್ಥಾನದ ಮತ್ತೊಬ್ಬ ಸರದಾರ.
೬ ಸಂಕಣ್ಣ . . ಹೊನ್ನ ಹಳ್ಳಿ ಆಸ್ಥಾನದ ಬೇರೊಬ್ಬ ಸರದಾರ.
೭. ಮಾದಣ್ಣ . . ಸಾಂತಣ್ಣನ ಮಗ.
೮. ಈಚಣ್ಣ . . ಹನುಮಣ್ಣನ ಮಗ.
೯. ವಾಮನ ಶಾಸ್ತ್ರಿಗಳು ಹೊನ್ನ ಹಳ್ಳಿಯ ಆಸ್ಥಾನದ ಧರ್ಮಾಧಿಕಾರಿಗಳು
೧೦ ವೆಂಕಪ್ಪ ಸೆಟ್ಟಿಗಳು . ಹೊನ್ನಹಳ್ಳಿಯ ಒಬ್ಬ ವರ್ತಕ ಮತ್ತು ಧರ್ಮಾಧಿಕಾರಿ
೧೧ ಲಿಂಗಯ್ಯ . . ಗಂಗವಳ್ಳಿಯಲ್ಲಿ ಬಂದು ನೆಲಸಿದ ಒಬ್ಬ ಕೃಷಿಕ.
೧೨ ನರಸಣ್ಣ . . ಲಿಂಗಯ್ಯನ ಮಗ.
೧೩ ರೇವಕ್ಕ . . ಸಾಂತಣ್ಣನ ಪತ್ನಿ, ಹೊನ್ನ ಹಳ್ಳಿಯ ರಾಣಿ.
೧೪. ನಂಜಮ್ಮ . . ನೀಲಣ್ಣನ ಪತ್ನಿ, ರೇವಕ್ಕನ ಗೆಳತಿ.
೧೫ ಮಲ್ಲಮ್ಮ . . ಲಿಂಗಯ್ಯನ ಮಡದಿ
೧೬ ಮಂಜಕ್ಕ . . ರೇವಕ್ಕ ಸಾಂತಣ್ಣರ ಮಗಳು
೧೭. ಚೆನ್ನಕ್ಕ . ಮಾದಣ್ಣನ ಸೇವಕಿ.
೧೮ ಭಟರು, ಪಹರೆಗಾರರು, ಸೇವಕರು. ದಾಸಿಯರು ಇತ್ಯಾದಿ

# ಹಾವಿನ ಹುತ್ತ

## ಒಂದು

"ಸಾಂತಣ್ಣ, ನಿನ್ನ ಆದರದ ಆತಿಥ್ಯ, ನನ್ನ ನಾಡನ್ನೇ ನಾನು ಮರೆಯು ವಂತೆ ಮಾಡಿದೆ." ಕುದುರೆಯನ್ನು ನಡೆಸುತ್ತಾ ಹನುಮಣ್ಣ ನುಡಿದ, "ನಿನ್ನ ಸತ್ಕಾರ ಮಾವನ ಮನೆಗೆ ಮೊದಲ ಬಾರಿ ದೀಪಾವಳಿ ಹಬ್ಬಕ್ಕೆ ಬಂದ ಹೊಸ ಅಳಿಯನಿಗೆ ದೊರೆಯುವ ಮನ್ನಣೆಗಿಂತಲೂ ಮಿಗಿಲಾಗಿದೆ. ನಾನು ನಿನಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದು."

"ಹನುಮಣ್ಣ, ನಿನ್ನ ಕೃತಜ್ಞತೆಯ ಮೂಟೆಯನ್ನು ಬಿಚ್ಚಲೇನು ಅವಸರ!" ಗೆಳೆಯನ ಕಾಲಾಳನ್ನು ಕುದುರೆಯಿಂದ ಕತ್ತರಿಸುತ್ತಾ ಸಾಂತಣ್ಣ ಪಡಿನುಡಿದ: "ನೀನು ನಮ್ಮೂರಿಂದ ಹೊರಡುವಾಗ ಕೃತಜ್ಞತೆಯ ಸರಕನ್ನು ಚೀಲದಿಂದ ಹೊರತೆಗೆದರಾಯಿತು."

"ನಾನು ನಾಳೆ ಊರಿಗೆ ಹೊರಡಬೇಕೆಂದಿರುವೆನು."

"ನಾಳೆಯೇ! ಅದೇನು ಅಷ್ಟು ಅವಸರ?" ಸಾಂತಣ್ಣನ ಹಣೆಯ ಮೇಲೆ ವಿಸ್ಮಯದ ಗೆರೆ ಮೂಡಿತು.

"ಹೂಂ, ನಾಳೆಯೇ ಗಂಗವಳ್ಳಿಗೆ ಹೊರಡಬೇಕೆಂದಿರುವೆನು. ನಾನು ನಿಮ್ಮೂರಿಗೆ ಬಂದು ಒಂದು ತಿಂಗಳಾಯಿತು."

"ಇನ್ನು ಒಂದು ಎಂಟು ದಿನ ನನ್ನ ಅರಮನೆಯಲ್ಲಿ ನೀನು ಇರಬೇಕು."

"ಸಾಧ್ಯವಿಲ್ಲ ಸಾಂತಣ್ಣ, ಕುರುಬನಿಲ್ಲದ ಕುರಿಹಿಂಡು ತೋಳನ ಬಾಯಿಗೆ ತುತ್ತಾಗಬಹುದು."

"ಕುರುಬನಿಲ್ಲದಿದ್ದರೂ, ನುರಿತ ನಾಯಿಗಳು ತೋಳಗಳನ್ನು ಅಟ್ಟಿ ಕುರಿಮಂದೆಯನ್ನು ಸುರಕ್ಷಿತವಾಗಿ ಇರಿಸಬಲ್ಲವು." ಸಾಂತಣ್ಣ ಪಡಿನುಡಿದ: "ಹನುಮಣ್ಣ, ಬುದ್ಧಿವಂತರಾದ ಮಂತ್ರಿಗಳಿರುವಾಗ, ನೀನೇಕೆ ನಾಡಿನ ಚಿಂತೆಯನ್ನು ಹಚ್ಚಿಕೊಳ್ಳಬೇಕು?"

"ಇಲ್ಲ ಸಾಂತಣ್ಣಾ, ನೀನೂ ಒಂದು ನಾಡಿನ ಅರಸು. ಸಿಂಹಾಸನವೆಂದರೆ ಹೂವಿನ ಹಾಸಿಗೆಯಲ್ಲ. ಅದು ಮುಳ್ಳಿನ ಮಣೆಯೆಂಬುದನ್ನು ನೀನೂ ಬಲ್ಲೆ. ನನ್ನ ಮೇಲೆ ನಿನಗಿರುವ ಅತಿರೇಕ ಪ್ರೀತಿಯಿಂದ ಇನ್ನೂ ನಾಲ್ಕು ದಿನ ನನ್ನ ಹೆಚ್ಚಿಗೆ ನಿಲ್ಲಿಸಿಕೊಳ್ಳಬೇಕೆಂದು ಹಟಮಾಡುತ್ತಿರುವೆ. ನಾನು ಇಲ್ಲಿರುವುದು ನಿನಗೂ ತೊಂದರೆ. ನನಗೂ ನನ್ನ ನಾಡಿನ ಚಿಂತೆ. ನೀನು ನನ್ನನ್ನು ತಡೆಯ ಬೇಡ."

ಗೆಳೆಯನ ಮಾತು ಸಾಂತಣ್ಣನಿಗೆ ನಿರಾಶೆಯನ್ನುಂಟುಮಾಡಿತು. ಅವನು ಗೆಳೆಯನನ್ನು ನಾಲ್ಕು ದಿನ ಹೆಚ್ಚಿಗೆ ನಿಲ್ಲಿಸಿಕೊಳ್ಳಬೇಕೆಂದು ಬಯಸಿದ್ದ. ಗೆಳೆಯರಿಬ್ಬರು ಚದುರಂಗ ಆಡುತ್ತಿದ್ದಾಗ, ಅದನ್ನು ನೋಡುತ್ತಾ ಸಾಂತಣ್ಣನ ಮಡದಿ ರೇವಕ್ಕ ಕುಳಿತಿದ್ದಳು. ಸಾಂತಣ್ಣ ಆನೆಯನ್ನು ನಡೆಸುತ್ತಾ ತನ್ನ ರಾಣಿಯ ಕಡೆಗೆ ದೃಷ್ಟಿಯನ್ನು ಹೊರಳಿಸಿದ. ಅವನು ಮಡದಿಯನ್ನು ಕುರಿತು, "ಲೇ, ರೇವು, ನೀನು ಬಾಯಿಗೆ ಬೀಗ ಜಡಿದಂತೆ ಮೌನವಾಗಿ ಕುಳಿತಿರುವೆಯಲ್ಲ! ನನ್ನ ಪರವಾಗಿ ನೀನು ಎರಡು ಮಾತುಗಳನ್ನು ಆಡಬಾರದೆ?" ಎಂದು ಉದ್ಗಾರವೆತ್ತಿದ.

"ಇಲ್ಲ ನನ್ನ ದೊರೆ, ನಿಮ್ಮ ಬತ್ತಳಿಕೆಯಲ್ಲಿ ಇರುವ ಅಂಬುಗಳೆಲ್ಲಾ ಮುಗಿಯಲಿ ಎಂದು ಕಾಯುತಿದ್ದೆ." ಮುಗುಳ್ನಗೆಯ ಹೂಬಿಸಿಲು ರೇವಕ್ಕನ ಕೆನ್ನೆಗಳ ಮೇಲೆ ಕಳೆಯಾಡಿತು. "ಪೂರ್ವದಲ್ಲಿ ಮಂಡನ ಮಿಶ್ರರು ತರ್ಕದಲ್ಲಿ ಶಂಕರಾಚಾರ್ಯರಿಗೆ ಸೋತಾಗ, ಅವರ ಮಡದಿ ಉಭಯ ಸರಸ್ವತಿ ಶಂಕರಾಚಾರ್ಯರಿಗೆ ತರ್ಕಯುದ್ಧವನ್ನು ಕೊಟ್ಟರಂತೆ. ಹಾಗೆಯೇ ನಾನೂ ಅಣ್ಣನೊಡನೆ ವಾದಿಸುವೆನು."

"ದಿಟವನ್ನೇ ಹೇಳಿದೆ ನನ್ನ ರಾಣಿ!" ಎಂದು ಸಾಂತಣ್ಣ ಮಡದಿಯ ಬೆನ್ನು ಚಪ್ಪರಿಸಿದ.

"ಎಂಟು ದಿನ ವಿಳಂಬಿಸುವುದರಿಂದ ಆತನ ರಾಜ್ಯ ಕಾರ್ಯಗಳಿಗೆ ಯಾವ ಲೋಪವೂ ಬರದು. ಎಂದು ಅಣ್ಣನಿಗೆ ಹೇಳಿ" ರೇವಕ್ಕ ನುಡಿದಳು: "ತಮ್ಮ ಕಂದನ ಮೋರೆಯನ್ನು ಕಾಣದೆ ಬೇಸರದಿಂದ ಅಣ್ಣ ಹೊರಟಿರುವುದಾದರೆ ಅವರು ಹಾಗೆ ಪ್ರಮಾಣ ಮಾಡಲಿ."

ಈ ನುಡಿಗಳನ್ನು ಕೇಳುತ್ತಿದ್ದ ಹನುಮಣ್ಣ ಮಾರ್ನುಡಿಯಲಿಲ್ಲ. ಆದುದರಿಂದ ರೇವಕ್ಕ ಅತಿಥಿಯ ಕಡೆ ದೃಷ್ಟಿಯನ್ನು ಹೊರಳಿಸಿ, "ಅಣ್ಣ, ನಿಮ್ಮ

ಅಮೂಲ್ಯವಾದ ಸಮಯದಿಂದ ಎಂಟು ದಿನಗಳನ್ನು ನನಗೆ ದಯಪಾಲಿಸ ಬೇಕೆಂದು ಬೇಡುವೆನು. ನನ್ನ ದೊರೆ ಅತಿಥಿಯಾಗಿ ನಿಮ್ಮ ನಾಡಿಗೆ ಬಂದಾಗ ನೀವು ಒಂದು ತಿಂಗಳು ಹೆಚ್ಚಿಗೆ ನಿಲ್ಲಿಸಿಕೊಳ್ಳಲು ನನ್ನ ಆಕ್ಷೇಪವಿಲ್ಲ." ಎಂದು ಮಾತು ಮುಂದುವರಿಸಿದಳು.

"ತಂಗಿ, ನಿಮ್ಮ ಮಾತನ್ನು ಅಲ್ಲಗಳೆಯಲು ನನಗೆ ದುಃಖವಾಗುವುದು.

"ಅಣ್ಣ, ನೀವು ಅಲ್ಪ ಕಾರಣಗಳ ಅಂಬುಗಳನ್ನು ಹೊಡೆದು ನನ್ನನ್ನು ಸೋಲಿಸಲು ಹೊರಟಿರುವಿರಿ. ನಮ್ಮ ನಾಡಿನಲ್ಲಿ ಪತಿಗೆ ಇದ್ದಷ್ಟೇ ಅಧಿಕಾರ ಸತಿಗೂ ಇದೆ." ರೇವಕ್ಕ ಮುಗುಳ್ನಗೆಯನ್ನು ಹೊರಚೆಲ್ಲುತ್ತಾ ನುಡಿದಳು: ನೀವು ಅತಿಥಿಯಾಗಿರಲು ಒಪ್ಪದಿದ್ದರೆ, ನನ್ನ ಸೆರೆಯಾಳಾಗಿ ಎಂಟು ದಿನ ಇಲ್ಲಿ ಉಳಿಯಬೇಕಾಗುವುದು. ಆಗ ನಿಮ್ಮ ಕೃತಜ್ಞತೆಯು ಮೂಟೆ ಉಳಿ ತಾಯವಾಗುವುದು."

"ತಂಗಿ, ಮಾತಿನಲ್ಲಿ ಹೊನ್ನಹಳ್ಳಿಯ ಜನರೆಲ್ಲ ಚದುರರು. ವಾದದಲ್ಲಿ ನಿನ್ನನ್ನು ಸೋಲಿಸಲು ಸಾಧ್ಯವಿದೆಯೇ?" ಹನುಮಣ್ಣ ನಗುತ್ತಾ ಮಾರ್ನುಡಿದ: "ನಾನು ಅತಿಥಿಯಾಗಿಯೇ ಉಳಿಯುವೆನು. ಸೆರೆಯಾಳಾಗಿರುವುದು ನಿಮ್ಮನ್ನೇ ಅವಮಾನಪಡಿಸಿದಂತಾಗುವುದು."

"ಹಾಗಾದರೆ ಸರಿ. ನಾನು ನಿಮ್ಮ ಸೆರೆಮನೆಯ ಅಧಿಕಾರಿಣಿಯಲ್ಲ. ನಿಮ್ಮ ಆದರ ಸತ್ಕಾರಗಳಿಗೆ ಮೀಸಲಾದ ದಾಸಿಯಾಗುವೆನು. ಅಣ್ಣ, ನೀವೂ ನನ್ನ ದೊರೆಗಳೂ ಸಾಂದೀಪರ ಶಿಷ್ಯರಾಗಿ ಓದು ಕಲಿತಿರಂತಲ್ಲ: ಆ ದಿನಗಳಲ್ಲಿ ನೀವು ಹೇಗಿದ್ದಿರಿ?"

"ಸಾಂದೀಪರು, ಕೃಷ್ಣ ಬಲರಾಮರ ಗುರುಗಳಾದ ಸಾಂದೀಪರಂತೆಯೇ ಮಹಾಜ್ಞಾನಿಗಳು." ಹನುಮಣ್ಣ ಭಕ್ತಿ ಬೆರೆತ ಸ್ವರದಲ್ಲಿ ಹೇಳಿದ. ಅವನ ಕಣ್ಣ ಮುಂದೆ ಗುರುಕುಲ ವಾಸದ ದಿನಗಳು ಕುಣಿದಾಡಿದುವು. ಅವನು ಉತ್ಸಾಹಭರಿತನಾಗಿ ಮಾತು ಮುಂದುವರಿಸಿದ: "ಅವರು ದ್ರೋಣಾಚಾರ್ಯರಂತೆ ಧನುರ್ವೇದದಲ್ಲಿ ಪಾರಂಗತರು; ಅವರು ನಮಗೆ ಶಾಸ್ತ್ರ ಪುರಾಣಗಳನ್ನೂ, ಬಿಲ್ಲು ವಿದ್ಯೆಯನ್ನೂ ಕಲಿಸುತಿದ್ದರು. ನಾನು ಗುರುಕುಲವನ್ನು ಸೇರುವ ಮುನ್ನ ನನಗೆ ಸೋದರನಿರಲಿಲ್ಲ. ಆದರೆ ದೇವರು ಗುರುಕುಲದಲ್ಲಿ ನಿನ್ನ ಪತಿಯ ರೂಪದಲ್ಲಿ ಒಬ್ಬ ಸೋದರನನ್ನು ದಯಪಾಲಿಸಿದ. ಅಲ್ಲಿ ನಾವು ರಾಮಲಕ್ಷ್ಮಣರಂತೆ ಒಂದಾಗಿಯೇ ದಿನಕಳೆದೆವು. ಓದು, ಉಣಿಸು, ಆಟ

ಮತ್ತು ನಿದ್ರೆಗಳಲ್ಲಿ ಸಹ ನಾವು ಪರಸ್ಪರ ಅಗಲುತ್ತಿರಲಿಲ್ಲ. ನಾವು ಎಂದೂ ಪರಸ್ಪರ ಕೆಡುನುಡಿದವರಲ್ಲ; ಕಲಹಿಸಿದವರಲ್ಲ; ಹಿಂಸಿಸಿದವರಲ್ಲ. ಆದರೆ ಸಿಟ್ಟು ನನಗೇ ಹೆಚ್ಚು. ಅಲ್ಲವೇ ಸಾಂತಣ್ಣಾ?"

"ಅಲ್ಲವೇ? ನಿನಗೆ ಮೂಗಿಗಿಂತಲೂ ಮೂರು ಗೇಣು ಮುನಿಸು ಹೆಚ್ಚು." ಸಾಂತಣ್ಣ ನುಡಿದ: "ಆದುದರಿಂದಲೇ ನಾವು ನಿನ್ನನ್ನು ದೂರ್ವಾಸ ಮುನಿಗಳೆಂದು ಕರೆಯುತ್ತಿದ್ದೆವು."

"ಆದರೆ ನೀನು ಹೊಟ್ಟೆ ಕಿಚ್ಚಿನ ಮೊಟ್ಟೆಕೋಳಿಯಾಗಿದ್ದೆ." ಹನುಮಣ್ಣನ ನೆನಪಿಗೆ ಗೆಳೆಯನಲ್ಲಿದ್ದ ಒಂದು ದೌರ್ಬಲ್ಯ ನೆನಪಿಗೆ ಬಂದಿತು. "ನೀನು ಭೇದಿಸಲಾಗದ ಲಕ್ಷ್ಯವನ್ನು ನಾನು ಹೊಡೆದರೆ, ನಿನಗಿಂತಲೂ ಮೊದಲು ನಾನು ಗುರುಗಳ ಪ್ರಶ್ನೆಗಳಿಗೆ ಉತ್ತರಿಸಿದರೆ, ನೀನು ಮತ್ಸರ ತಾಳುತ್ತಿದ್ದೆ. ಆದರೆ ನಮ್ಮ ಗೆಳೆತನದ ಗಂಗಾಜಲ, ನಮ್ಮ ಮನಸ್ಸಿಗೆ ಅಂಟುತ್ತಿದ್ದ ಕೊಳೆ ಕಲ್ಮಶಗಳನ್ನು ತೊಳೆದು ಹಸನಾಗಿಸುತ್ತಿದ್ದಿತು."

"ಅಣ್ಣ, ಆದರೆ ನನ್ನ ದೊರೆಗಳು ಮತ್ಸರ ಸ್ವಭಾವದವರೆಂಬುದು ನನಗೆ ತಿಳಿದೇ ಇರಲಿಲ್ಲ." ರೇವಕ್ಕ ನಕ್ಕಳು.

"ನಿನ್ನ ಪ್ರೇಮದ ಬೆಂಕಿ ಅಸೂಯೆ ಮತ್ಸರಗಳ ಕಿಟ್ಟವನ್ನು ತೊಡೆದು ಹಾಕಿ, ಸಾಂತಣ್ಣನ ಹೃದಯವನ್ನು ಪುಟಕ್ಕೆ ಇಕ್ಕಿದ ಬಂಗಾರವನ್ನಾಗಿಸಿರಬಹುದು. ಅಲ್ಲವೇ ಸಾಂತಣ್ಣಾ!"

ಎಂದು ನುಡಿದ ಹನುಮಣ್ಣ ಕಣ್ಣುಗಳನ್ನು ಗೆಳೆಯನ ಮೊಗದತ್ತ ಹೊರಳಿಸಿದ. ರೇವಕ್ಕನ ತುಟಿಗಳ ಮೇಲೆ ಹೆಮ್ಮೆ ಬೆರೆತ ನಗೆಯಲರು ಮೂಡಿತು. ಆದರೆ ಸಾಂತಣ್ಣ ಮಾರ್ನುಡಿಯಲಿಲ್ಲ.

"ಸಾಂತಣ್ಣ, ಈಗ ನಿನ್ನ ವಿಷಯದಲ್ಲಿ ನಾನು ಅಸೂಯೆ ತಾಳುತ್ತಿದ್ದೇನೆ." ಗೆಳೆಯ ಮಾತಾಡದುದನ್ನು ಕಂಡು ಹನುಮಣ್ಣ ಮಾತು ಮುಂದುವರಿಸಿದ. "ನಿನ್ನ ಬಾಳುವೆಯನ್ನು ಬಂಗಾರವಾಗಿಸಬಲ್ಲ ರನ್ನೆ ನಿನ್ನ ಬಾಳುವೆಯ ಜತೆಗಾತಿಯಾಗಿದ್ದಾಳೆ."

ಸಾಂತಣ್ಣನು ತನ್ನ ತುಟಿಗಳನ್ನು ತೆರೆಯಲಿಲ್ಲ. ಅವನ ಮೊಗ ಕೆಂಪಡರಿತು. ಹಣೆಯಲ್ಲಿ ಬೆವರ ಹನಿಗಳು ಮೂಡಿದುವು. ಅವನು ತನ್ನ ಕುದುರೆಯನ್ನು ತಪ್ಪಿ ನಡೆಸಿದುದರಿಂದ ಹನುಮಣ್ಣ ತನ್ನ ಆನೆಯಿಂದ ಗೆಳೆಯನ ಮಂತ್ರಿಯನ್ನು ಹೊಡೆದು ಹಾಕಿದ.

“ನೀವು ಆಟದಲ್ಲಿ ಸೋಲುತ್ತಿರುವಿರಿ.” ನಗೆಬೆರೆತ ಸ್ವರದಲ್ಲಿ ರೇವಕ್ಕ ಹೇಳಿದಳು: “ಆದರೆ ಚದುರಂಗ ಆಟದಲ್ಲಿ ಎತ್ತಿದ ಕೈ ನಿಮ್ಮದು.”

“ಹೌದು. ನಾನು ಸೋಲುತ್ತಿರುವೆನು.” ಸಾಂತಣ್ಣ ಬಿಸಿಯುಸಿರನ್ನು ಹೊರಚೆಲ್ಲಿದ.

ಸಾಂತಣ್ಣನ ಎದೆ ಭಾರವಾಯಿತು. ಮನಸ್ಸಿನ ಉಲ್ಲಾಸ ಇಲ್ಲವಾಯಿತು. ತನ್ನ ಸುತ್ತಲೂ ಮಂಜು ಕವಿಯುತ್ತಿರುವಂತೆ ಅವನಿಗೆ ಭಾಸವಾಯಿತು. ತನ್ನ ಮನಸ್ಸೇಕೆ ಕ್ಷುಬ್ಧವಾಗಿದೆಯೆಂಬುದು ಅವನಿಗೆ ತಿಳಿಯದು. ಅವನ ಅಂತರಂಗದಲ್ಲಿ ಬಹುಕಾಲದಿಂದ ಮಲಗಿ ನಿದ್ರಿಸುತಿದ್ದ ಕೃಷ್ಣ ಸರ್ಪ ಎಚ್ಚತ್ತು ಹೆಡೆಯಾಡಿಸತೊಡಗಿತ್ತು.

---

## ಎರಡು

ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡನ್ನು ಹೊಯ್ಸಳರು ಆಳುತಿದ್ದರು. ಅವರ ಆಳ್ವಿಕೆ ಬಡಗಿನಲ್ಲಿ ಕೃಷ್ಣಾ ನದಿಯಿಂದ ಹಿಡಿದು ತೆಂಕಲಲ್ಲಿ ಭವಾನಿ ನದಿಯ ತನಕ ಪಸರಿಸಿತ್ತು. ದ್ವಾರ ಸಮುದ್ರ ಅವರ ರಾಜಧಾನಿಯಾಗಿತ್ತು. ಹೊಯ್ಸಳರ ಬೆಳ್ಗೊಡೆಯ ಅಧೀನದಲ್ಲಿ ನೂರಾರು ಮಂದಿ ಸಾಮಂತ ರಾಜರಿದ್ದರು. ಪಡುಗಡಲ ದಂಡೆಯಲ್ಲಿ ಎರಡು ಸಾಮಂತ ರಾಜ್ಯಗಳು ಪ್ರಮುಖವಾಗಿದ್ದುವು. ಅವುಗಳಲ್ಲಿ ಮೊದಲನೆಯದು ಗಂಗವಳ್ಳಿ ಮತ್ತು ಎರಡನೆಯದು ಹೊನ್ನ ಹಳ್ಳಿ. ಗಂಗವಳ್ಳಿಯನ್ನು ಹನುಮಣ್ಣ ನಾಯಕನೆಂಬ ಸಾಮಂತ ರಾಜನೂ, ಹೊನ್ನ ಹಳ್ಳಿಯನ್ನು ಸಾಂತಣ್ಣ ನಾಯಕನೆಂಬ ಮಾಂಡಲಿಕ ಅರಸನೂ ಆಳುತಿದ್ದರು.

ನಾಸಿಕವೆಂಬುದು ಗೋದಾವರಿ ನದಿಯ ದಂಡೆಯಲ್ಲಿ ಇರತಕ್ಕ ಒಂದು ಪುಣ್ಯ ಕ್ಷೇತ್ರ. ಆ ನದಿಯ ತೀರದಲ್ಲಿ ಸಾಂದೀಪರ ಗುರುಕುಲವಿದ್ದಿತು. ಆ ದಿನಗಳಲ್ಲಿ ಸಾಂದೀಪರ ಗುರುಕುಲ ದಕ್ಷಿಣ ಭಾರತದಲ್ಲೆಲ್ಲಾ ಖ್ಯಾತಿ ಪಡೆದಿದ್ದಿತು. ಸಾಂದೀಪರು ಶಾಸ್ತ್ರ ಮತ್ತು ಶಸ್ತ್ರವಿದ್ಯೆಗಳೆರಡರಲ್ಲಿಯೂ ನಿಷ್ಣಾತರಾಗಿದ್ದರು. ಅವರು ಕೌಟಿಲ್ಯನ ಅರ್ಥ ಶಾಸ್ತ್ರ, ಶುಕ್ರಾಚಾರ್ಯನ ದಂಡ ನೀತಿ, ಇತ್ಯಾದಿ ರಾಜ್ಯ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಬಹು ಆಳವಾಗಿ ಅಭ್ಯಾಸ ಮಾಡಿದ್ದರು. ಅಲ್ಲದೆ ಬಾಣ ಪ್ರಯೋಗ, ಖಡ್ಗ ಯುದ್ಧ, ಮಲ್ಲ ಯುದ್ಧ, ಆನೆ ಕುದುರೆ ತೇರುಗಳನ್ನೇರುವುದು ಇತ್ಯಾದಿ ಕ್ಷಾತ್ರ ಕರ್ಮಗಳ

ಅರಿವುಳ್ಳವರಾಗಿದ್ದರು. ಆದುದರಿಂದ ತೆಂಕಣದ ದೊರೆಗಳು ಸಾಂದೀಪರನ್ನು ಅಭಿನವ ದ್ರೋಣಾಚಾರ್ಯರೆಂದು ಸನ್ಮಾನಿಸುತ್ತಿದ್ದರು; ಅವರ ಬಳಿಯಲ್ಲಿ ವಿದ್ಯೆ ಕಲಿಯಲೆಂದು ತಮ್ಮ ಮಗಂದಿರನ್ನು ಕಳುಹುತ್ತಿದ್ದರು. ಗುರುಕುಲ ನಿರಾತಂಕವಾಗಿ ನಡೆಯಲೆಂದು ತಮ್ಮ ನಾಡುಗಳಲ್ಲಿ ಹೊಲಗದ್ದೆಗಳನ್ನು ದತ್ತಿ ಬಿಟ್ಟು, ಅವುಗಳ ಆದಾಯವನ್ನು ಸಂಭಾವನೆಯಾಗಿ ಗುರುಕುಲಕ್ಕೆ ಕಳುಹಿ ಕೊಡುತ್ತಿದ್ದರು.

ಗಂಗವಳ್ಳಿಯ ಹನುಮಣ್ಣನಿಗೂ ಹೊನ್ನ ಹಳ್ಳಿಯ ಸಾಂತಣ್ಣನಿಗೂ ಪರಸ್ಪರ ಪರಿಚಯವಾದುದು ಸಾಂದೀಪರ ಗುರುಕುಲದಲ್ಲಿ. ಅವರಿಬ್ಬರ ಮನೆಮಾತಾದ ಕನ್ನಡ ನುಡಿ ಈರ್ವರನ್ನೂ ಒಂದುಗೂಡಿಸಲಿರುವ ಬೆಸುಗೆ ಯಾಯಿತು. ಈರ್ವರೂ ಪರಸ್ಪರ ಒಡಹುಟ್ಟಿದವರಿಗಿಂತಲೂ ಅತಿಶಯ ವಾಗಿ ಪ್ರೀತಿಸತೊಡಗಿದರು. ಆದರೆ ಈ ಗೆಳೆತನದ ಹಾಲಿನಲ್ಲಿ ಒಂದೊಂದು ಸಲ ಸಾಂತಣ್ಣ ಮಾತ್ಸರ್ಯದ ಹುಳಿಯನ್ನು ಹಿಂಡುತ್ತಿದ್ದ. ಆದರೆ ಹನು ಮಣ್ಣನ ವಿವೇಕ ದೂರದೃಷ್ಟಿಗಳು ಸಾಂತಣ್ಣನು ಹಿಂಡಿದ ಹುಳಿಯನ್ನು ತೊಡೆದು ಹಾಕುತ್ತಿದ್ದುವು. ಆಟ ವಿನೋದಗಳಲ್ಲಿ ತನ್ನದು ಮೇಲುಗೈಯಾ ದರೂ ಸಹ, ಸಾಂತಣ್ಣ ಕಿನಿಸನ್ನು ತಳೆದಿರುವನೆಂದು ಅರಿವಾದೊಡನೆಯೇ ಹನುಮಣ್ಣ ತಾನೇ ಸೋಲು ಹೊಂದಿದವನಂತೆ ನಟಿಸುತ್ತಿದ್ದ. ವಿದ್ಯೆಯಲ್ಲಿ ತಾನು ಸಾಂತಣ್ಣನಿಗಿಂತಲೂ ಜಾಣನೆಂದು, ಗೆಳೆಯನು ಅಸೂಯಾಕುಲನಾ ಗಿರುವನೆಂದು ತಿಳಿದಾಗ, ಹನುಮಣ್ಣ ಗುರುಗಳ ಪ್ರಶ್ನೆಗಳಿಗೆ ಉತ್ತರಿಸದೆ ಬೆಪ್ಪನಂತೆ ನಿಲ್ಲುತ್ತಿದ್ದ. ಹೀಗೆ ಅವನು ಗೆಳೆತನದ ಮಂದಿರವನ್ನು ಬಹು ಸಾವಧಾನವಾಗಿ ಕಟ್ಟುತಲಿದ್ದ.

ಎಂಟು ವರ್ಷಗಳ ಕಾಲ ಗೆಳೆಯರಿಬ್ಬರೂ ಗುರುಗಳ ಅಡಿದಾವರೆಗಳ ಸಮೀಪದಲ್ಲಿ ಕುಳಿತು ಶಸ್ತ್ರ ಮತ್ತು ಶಾಸ್ತ್ರ ವಿದ್ಯೆಗಳನ್ನು ಕಲಿತು ಉಭಯ ವಿದ್ಯಾ ವಿಶಾರದರಾದರು. ಅವರು ಗುರುಗಳಿಗೆ ದಕ್ಷಿಣೆಯನ್ನು ಸಮರ್ಪಿಸಿ ತಮ್ಮ ತಮ್ಮ ನಾಡುಗಳಿಗೆ ತೆರಳುವ ಗಳಿಗೆ ಬಂತು. ತಾವಿಬ್ಬರೂ ಅಗಲಿ ದೂರವಿರಬೇಕೆಂಬ ಆಲೋಚನೆ ದುಃಖವನ್ನು ತಂದೊಡ್ಡಿತು. ಇಬ್ಬರ ಕಣ್ಣುಗಳಲ್ಲಿಯೂ ಹನಿಗಳು ತುಂಬಿದುವು

"ನೋಡು ಹನುಮಣ್ಣ, ನೀನು ಅಣ್ಣನಿಗಿಂತಲೂ ನೂರು ಪಾಲು ಮಿಗಿಲು." ಬಿಕ್ಕುವ ಸ್ವರದಲ್ಲಿ ಸಾಂತಣ್ಣ ಹೇಳಿದ: "ಮೊದಲು ನಾನು

ಹೊಟ್ಟೆಕಿಚ್ಚಿನ ಮೊಟ್ಟೆಯಾಗಿದ್ದೆ. ಅಸೂಯೆಯಿಂದ ನಾನು ಅನೇಕ ಸಲ ನಿನ್ನನ್ನು ಕಾಡಿದೆ. ಆದರೆ ನೀನು ನನ್ನ ಕೊರತೆಯನ್ನು ಕಳೆದು ಮನುಷ್ಯ ನನ್ನಾಗಿ ಮಾಡಿದಿ. ನೀನಿಲ್ಲದಿದ್ದರೆ ನನ್ನ ಬದುಕು ಬರಿದಾದಂತೆ ತೋರು ವುದು."

"ಸಾಂತಣ್ಣ, ನಿನ್ನನ್ನು ಬಿಟ್ಟು ತೆರಳುವ ಆಲೋಚನೆ ಎದೆಯನ್ನು ಭಾರಗೊಳಿಸಿದೆ." ಹನುಮಣ್ಣ ಗೆಳೆಯನ ಹೆಗಲ ಮೇಲೆ ಕೈಹಾಕಿ ನುಡಿದ. "ನಾನು ಮುಂಗೋಪಿ. ಆದರೆ ನೀನು ಸಹನೆಯಿಂದ ನಾನು ಚುಚ್ಚಿದ ಮುಳ್ಳುಗಳನ್ನೆಲ್ಲಾ ತಾಳಿಕೊಂಡೆ."

"ನನ್ನನ್ನು ಮರೆಯಬೇಡ ಹನುಮಣ್ಣ. ನಾನು ಊರಿಗೆ ಸೇರಿದ ಮೇಲೆ ದೂತರ ಮೂಲಕ ನಿನಗೆ ಓಲೆಗಳನ್ನು ಕಳುಹುವೆನು."

"ನಾನು ನಿನಗೆ ಓಲೆಗಳನ್ನು ಬರೆಯುವೆನು. ನಿನ್ನ ಮರೆಯುವುದಿಲ್ಲ." ಎಂದು ಹನುಮಣ್ಣ ಗೆಳೆಯನಿಗೆ ಮಾತುಕೊಟ್ಟ.

ಗೆಳೆಯರು ಗುರುಕುಲವನ್ನು ತೊರೆದು ತಮ್ಮ ತಮ್ಮ ನಾಡುಗಳನ್ನು ಸೇರಿದರು. ತಮ್ಮ ಅರಮನೆಗಳನ್ನು ಸೇರಿದ ಮೇಲೂ ಅವರು ಗುರುಕುಲದ ಗೆಳೆತನವನ್ನು ಮರೆಯಲಿಲ್ಲ. ಸಾಂತಣ್ಣ ಎರಡು ತಿಂಗಳುಗಳಿಗೊಮ್ಮೆ ಗೆಳೆಯ ನಿಗೆ ಓಲೆ ಬರೆದು ದೂತರ ಮೂಲಕ ಗಂಗವಳ್ಳಿಗೆ ಕಳುಹಿಸುತಿದ್ದ. ಹನು ಮಣ್ಣನ ಪ್ರೇಮಪತ್ರಗಳೊಡನೆ ಚಾರರು ಆಗಾಗ ಹೊನ್ನ ಹಳ್ಳಿಯನ್ನು ಸೇರು ತಿದ್ದರು. ಆ ಪತ್ರಗಳು ಗುರುಕುಲದಲ್ಲಿ ಮೊಳೆತ ಗೆಳೆತನದ ಬಳ್ಳಿಗೆ ನೀರೆರೆದು ಕೊನರಿಸಿ ಹಬ್ಬಿಸುತಿದ್ದುವು.

ಒಂದೆರಡು ವರ್ಷಗಳಲ್ಲಿ ಹನುಮಣ್ಣನಿಗೆ ವಿವಾಹವಾಯಿತು. ಆ ಸಮಾರಂಭಕ್ಕೆ ಬಂದೇ ತೀರಬೇಕೆಂದು ಅವನು ಗೆಳೆಯನನ್ನು ಆಮಂತ್ರಿಸಿದ್ದ. ಸಾಂತಣ್ಣ ಗೆಳೆಯನ ಕೋರಿಕೆಯಂತೆ ಗಂಗವಳ್ಳಿಗೆ ತೆರಳಿ ಗೆಳೆಯನ ಮದುವೆಯ ಸಡಗರದಲ್ಲಿ ತಾನೂ ಪಾಲುಗಾರನಾಗಿದ್ದ. ಅವನು ಮರಳಿ ದಾಗ, ಹನುಮಣ್ಣ ತಾನು ಬಿಡುವು ಮಾಡಿಕೊಂಡು ಹೊನ್ನ ಹಳ್ಳಿಗೆ ಬರುವೆ ನೆಂದು ಮಿತ್ರನಿಗೆ ವಾಗ್ದಾನ ಮಾಡಿದ.

ವರ್ಷಗಳು ಆರೇಳು ಕಳೆದು ಹೋದುವು. ಈ ಕಾಲಾವಧಿಯಲ್ಲಿ ಸಾಂತಣ್ಣ ರೇವಕ್ಕನನ್ನು ಮದುವೆಯಾದ. ಆದರೆ ತಾನು ಮೆಚ್ಚಿದ ಕನ್ನೆ ಯನ್ನು ಮದುವೆಯಾದ ಸಂತೋಷದ ಹೂ ಬಿಸಿಲು ಆರುವ ಮುನ್ನ, ತಂದೆ

ಮಡಿದುದರಿಂದ ಸಾಂತಣ್ಣ ಗದ್ದುಗೆಯನ್ನೇರಿ ರಾಜದಂಡವನ್ನು ಕೈಯಲ್ಲಿ ಹಿಡಿಯಬೇಕಾಗಿ ಬಂತು. ಹನುಮಣ್ಣನೂ ಗಂಗವಳ್ಳಿಯ ಅರಸನಾದ. ನಾಡ ಆಡಳಿತದ ಹೊರೆ ಹೆಗಲ ಮೇಲೆ ಬಿದ್ದುದರಿಂದ ಅವನಿಗೆ ಗೆಳೆಯನ ಆಮಂತ್ರಣವನ್ನು ಮನ್ನಿಸಿ ಹೊನ್ನ ಹಳ್ಳಿಗೆ ಬರಲಾಗಲಿಲ್ಲ.

ಪರಸ್ಪರ ಬರೆಯುತ್ತಿದ್ದ ಪತ್ರಗಳು ಅವರ ಗೆಳೆತನವನ್ನು ಚಿರವಾಗಿರಿಸುತ್ತಿದ್ದುವು. ಅವರು ಪತ್ರಗಳಲ್ಲಿ ತಮ್ಮ ಚಿಂತೆಗಳನ್ನು ಪರಸ್ಪರ ತೋಡಿಕೊಳ್ಳುತ್ತಿದ್ದರು; ಸುಖಸಂತೋಷಗಳನ್ನು ಪರಸ್ಪರ ಹಂಚಿಕೊಳ್ಳುತ್ತಿದ್ದರು; ಪರಸ್ಪರ ಸುಖದುಃಖಗಳಲ್ಲಿ ಪಾಲುಗಾರರಾಗುತ್ತಿದ್ದರು. ಹನುಮಣ್ಣ ಈಚಣ್ಣನೆಂಬ ಹೆಸರಿನ ಮಗನ ತಂದೆಯಾದ. ಸಾಂತಣ್ಣನಿಗೆ ಮಾದಣ್ಣನೆಂಬ ಗಂಡು ಕೂಸು ಹುಟ್ಟಿತು.

ತನ್ನ ನಾಡಿನ ಅತಿಥಿಯಾಗಿ ಬಂದೇ ತೀರಬೇಕೆಂದು ಸಾಂತಣ್ಣ ದೂತರ ಮೂಲಕ ಮಿತ್ರನನ್ನು ನಿರ್ಬಂಧಿಸುತ್ತಲೇ ಇದ್ದ. ಹನುಮಣ್ಣನಿಗಾದರೂ ರಾಜ್ಯಭಾರದ ಹೊರೆಯನ್ನು ನೀಗಿ ನಾಲ್ಕು ದಿನ ಹಾಯಾಗಿ ಉಲ್ಲಾಸದಿಂದ ಇರಬೇಕೆಂದು ಮನಸ್ಸಾಯಿತು. ಆದುದರಿಂದ ರಾಜ್ಯ ಶಾಸನದ ಹೊರೆಯನ್ನು ಅವನು ಮಂತ್ರಿಗಳಿಗೆ ಒಪ್ಪಿಸಿದ; ತಾನು ಮಂಜಿಯನ್ನೇರಿ ಹೊನ್ನಹಳ್ಳಿಗೆ ಪಯಣವನ್ನು ಕೈಗೊಂಡ.

ಬಾಲ್ಯದ ಗೆಳೆಯನು ತನ್ನ ಅರಮನೆಗೆ ಚಿತ್ತೈಸಿದಾಗ ಸಾಂತಣ್ಣನಿಗಾದ ಹಿಗ್ಗನ್ನು ವರ್ಣಿಸ ತೀರದು. ಅವನು ಮಡದಿಯೊಡನೆ ರಾಜವೈಭದಿಂದ ಗೆಳೆಯನನ್ನು ಸ್ವಾಗತಿಸಿದ; ಆದರದಿಂದ ಉಪಚರಿಸಿದ. ಗೆಳೆಯರಿಬ್ಬರು ರಾಜ್ಯಭಾರದ ಚಿಂತೆಗಳನ್ನು ಮರೆತು ಇನ್ನೊಮ್ಮೆ ಬಾಲ್ಯಾವಸ್ಥೆಯಲ್ಲಿ ಅಡಿಗಳನ್ನಿರಿಸಿದರು.

---

## ಮೂರು

ರೇವಕ್ಕನ ಕೋರಿಕೆಯಂತೆ ಹನುಮಣ್ಣ ಇನ್ನೊಂದು ಎಂಟು ದಿನ ಹೊನ್ನ ಹಳ್ಳಿಯಲ್ಲಿ ಇರಲು ಒಪ್ಪಿದ. ಸಾಂತಣ್ಣನಿಗೆ ಕೈತುಂಬಾ ರಾಜ್ಯ ಕಾರ್ಯಗಳಿರುತ್ತಿದ್ದುದರಿಂದ ಯಾವಾಗಲೂ ಗೆಳೆಯನ ಒಡನಾಡಿಯಾಗಿರಲು ಸಾಧ್ಯವಾಗುತ್ತಿರಲಿಲ್ಲ. ಅವನು ಪ್ರಜೆಗಳ ಗೋಳನ್ನು ಕೇಳಬೇಕಾಗುತ್ತಿದ್ದಿತು; ಜನರು ತರುವ ದೂರುಗಳನ್ನು ಕೇಳಿ ನ್ಯಾಯವನ್ನು ನೀಡಬೇಕಾಗಿದ್ದಿತು.

ಮಂತ್ರಿಗಳೊಡನೆ ರಾಜ್ಯ ಕಾರ್ಯಗಳನ್ನು ಚರ್ಚಿಸಿ ನಿರ್ಧಾರವನ್ನು ಕೈಗೊಳ್ಳ ಬೇಕಾಗುತ್ತಿದ್ದಿತು. ಹೀಗೆ ದೊರೆ ಶಾಸನ ಕಾರ್ಯಗಳಲ್ಲಿ ನಿರತನಾಗಿದ್ದಾಗ, ಹನುಮಣ್ಣನೊಬ್ಬನೇ ಏಕಾಂಗಿಯಾಗಿ ಅರಮನೆಯಲ್ಲಿ ಸಮಯಕಳೆಯಬೇ ಕಾಗುತ್ತಿದ್ದಿತು. ಅತಿಥಿ ಒಬ್ಬಂಟಿಗನಾಗಿರುವುದನ್ನು ಕಂಡು ರೇವಕ್ಕ ಆತನ ಬೇಸರಗಳೆಯಲು ಒಡನಾಡಿಯಾಗಿದ್ದಳು.

ಗೆಳೆಯನ ಬೇಸರವನ್ನು ಕಳೆದು ಆತನನ್ನು ಉಲ್ಲಾಸಚಿತ್ತನನ್ನಾಗಿ ಮಾಡಿದರೆ ಪತಿಯು ಸಂತೋಷಗೊಳ್ಳುವನೆಂದು ರೇವಕ್ಕ ತಿಳಿದಿದ್ದಳು. ಆದುದರಿಂದ ಆಕೆ ಸಂಕೋಚವನ್ನು ತೊರೆದು ಅಣ್ಣ ತಂಗಿಯರು ಸಲುಗೆ ಯಿಂದ ವರ್ತಿಸುವಂತೆ ಹನುಮಣ್ಣನೊಡನೆ ನಡೆದುಕೊಂಡಳು. ಆಕೆ ಅವನನ್ನು ಅರಮನೆಯ ಚಿತ್ರ ಶಾಲೆಗೆ ಕರೆದುಕೊಂಡು ಹೋಗಿ, ಕಲಾವಿದರು ಗೋಡೆಗಳ ಮೇಲೆ ಬರೆದ ಚಿತ್ರಗಳ ಸೊಬಗು ಸೌಂದರ್ಯಗಳನ್ನು ತೋರಿಸಿ ಕೊಟ್ಟಳು. ರಾಜೋದ್ಯಾನಕ್ಕೆ ಅವನನ್ನು ಕರೆದುಕೊಂಡು ಹೋಗಿ ಬಗೆ ಬಗೆಯ ಹೂಗಳ ಚೆಲುವನ್ನು ಬಡಿಸಿ, ಅವನ ಕಣ್ಣುಗಳಿಗೆ ಹಬ್ಬದೂಟವನ್ನು ಉಣಿಸುತ್ತಿದ್ದಳು.

ಸಂಜೆ ವೇಳೆಗೆ ಅವರು ಸಂಗೀತ ಶಾಲೆಯನ್ನು ಸೇರುತ್ತಿದ್ದರು. ಹನು ಮಣ್ಣ ರತ್ನಪೀಠವನ್ನು ಅಲಂಕರಿಸುತ್ತಿದ್ದ. ರೇವಕ್ಕ ವೀಣೆಯನ್ನು ತೆಗೆದು ಕೊಳ್ಳುತ್ತಿದ್ದಳು; ಆಕೆಯ ಬೆರಳುಗಳು ವೀಣೆಯ ತಂತಿಗಳನ್ನು ಸರಿಪಡಿಸು ತ್ತಿದ್ದುವು. ಅನಂತರ ಅವಳು ತಂತಿಗಳನ್ನು ಮಿಾಟುತ್ತಿದ್ದಳು. ಅವಳ ಕೊರಳಿಂದ ಮಧುರ ಗಾನ ಹೊಮ್ಮುವುದು; ಅವಳ ಬಾಯ್ದೆರೆಯಿಂದ ಮಧುರ ಸಂಗೀತ ಅಲೆಅಲೆಯಾಗಿ ಹೊರಬರುವುದು; ಹನುಮಣ್ಣನ ಜೀವವನ್ನು ಸಂತಸದ ಕಡಲಲ್ಲಿ ತೇಲಿಸುವುದು. ಆಗ ಅವನ ಚಿತ್ತದಲ್ಲಿ ಸುಂದರವಾದ ಸವಿಭಾವಗಳು ಮೂಡುವುವು. ಆತ ರೇವಕ್ಕ ಹಾಡುತ್ತಿದ್ದ ಸುಂದರ ಗೀತೆ ಗಳನ್ನು ಕೇಳಿ ಮೈಮರೆಯುತ್ತಿದ್ದ. ಆಕೆ ಗೀತೆಯನ್ನು ಹಾಡಿ ಮುಗಿಸಿದಾಗ ಅವನು, "ತಂಗಿ, ನೀನು ಸಾಮಾನ್ಯ ಹಾಡುಗಾತಿಯಲ್ಲ. ಸಂಗೀತ ಸರಸ್ವತಿ ಯಾಗಿರುವಿ." ಎಂದು ಗೀತೆಯನ್ನು ಮೆಚ್ಚಿ ಹೊಗಳುತ್ತಿದ್ದ.

ಹೊಗಳಿಕೆಯನ್ನು ಕೇಳಿದಾಗ ರೇವಕ್ಕನ ಮೊಗದಾವರೆ ಹರುಷದಿಂದ ಅರಳುತ್ತಿದ್ದಿತು. ಹೆಮ್ಮೆಯಿಂದ ಅವಳ ಮೊಗದಲ್ಲಿ ಮುಗುಳ್ನಗೆಯ ಬಿಸಿಲು ಲಾಸ್ಯವಾಡುತ್ತಿದ್ದಿತು.

ಒಂದು ದಿನ ಸಂಗೀತ ಶಾಲೆಯಲ್ಲಿ ರೇವಕ್ಕ ವೀಣೆಯನ್ನು ಮೀಟುತ್ತಾ ಜಯದೇವ ಕವಿಯ ಗೀತಾ ಗೋವಿಂದದ ಒಂದು ಅಷ್ಟಪದಿಯನ್ನು ಹಾಡಿದಳು. ರಾಧೆಯ ವಿರಹ ವ್ಯಥೆಯನ್ನು ಬಣ್ಣಿಸುವ ಗೀತಿಕೆಯದು. ರಾಧೆಯ ಹೃದಯದ ಪ್ರೇಮವೆಲ್ಲ ಸಂಗೀತ ರೂಪವನ್ನು ತಾಳಿ ರೇವಕ್ಕನ ಕಂಠದಿಂದ ಹೊನಲಾಗಿ ಪ್ರವಹಿಸುತಿದ್ದಿತು. ಆ ಗೀತಿಕೆ ಹನುಮಣ್ಣನ ಹೃದಯವನ್ನು ಕವಡಿಸಿತು. ತಾನು ನಾಡಿನಲ್ಲಿ ಬಿಟ್ಟು ಬಂದ ಮಡದಿಯ ನೆನಪು ಅವನಿಗಾಯಿತು. ಅಗಲಿಕೆಯ ಕಿಚ್ಚು ಅವನ ಎದೆಯಲ್ಲಿ ಹೊಗೆಯಾಡಿತು. ಅವನು ಆ ಗೀತಿಕೆಯಲ್ಲಿ ಪ್ರೇಮದ ದಿವ್ಯತೆ ಮತ್ತು ಭವ್ಯತೆಗಳನ್ನು ದರ್ಶನ ಮಾಡಿದ. ಅವನ ಕಣ್ಣುಗಳಲ್ಲಿ ಹನಿತುಂಬಿದುವು. ಅವನು "ತಂಗಿ, ನಿನಗೆ ಶಾರದೆ ಒಲಿದಿದ್ದಾಳೆ. ನೀನು ಜಯದೇವ ಕವಿಯ ಹೃದಯವನ್ನು ತಿಳಿದುಕೊಂಡಿದ್ದೀಯೆ. ಇಷ್ಟೊಂದು ದಿವ್ಯವಾಗಿ ಯಾವ ಗಾಯಕನೂ ಹಾಡಿದುದನ್ನು ನಾನು ಕೇಳಿಲ್ಲ" ಎಂಬ ಉದ್ಗಾರವನ್ನೆತ್ತಿದ.

"ನಾನು ಅಷ್ಟೊಂದು ಸಂಗೀತವನ್ನು ಕಲಿತವಳಲ್ಲ." ರೇವಕ್ಕ ವಿನಯ ಬೆರೆತ ಸ್ವರದಲ್ಲಿ ಮಾರ್ನುಡಿದಳು. "ನನ್ನ ಗೀತೆಯನ್ನು ನೀವು ಮೆಚ್ಚಿದುದು ನಿಮ್ಮ ದೊಡ್ಡ ಮನಸ್ಸನ್ನು ಸೂಚಿಸುವುದು."

ಅನಿತರಲ್ಲಿ ಸಾಂತಣ್ಣ ರಾಜಕಾರ್ಯಗಳನ್ನು ಮುಗಿಸಿಕೊಂಡು ಸಂಗೀತ ಶಾಲೆಯನ್ನು ಪ್ರವೇಶಿಸಿದ. ಆತನ ಕಣ್ಣುಗಳಿಗೆ ಭಾವ ಸಮಾಧಿಯಿಂದ ಎಚ್ಚರಗೊಂಡ ಹನುಮಣ್ಣನ ಅರಳಿದ ಮೊಗ, ಅರಳಿದ ಕೆಂಗುಲಾಬಿಯಂತಾದ ರೇವಕ್ಕನ ಮೋರೆ, ಇವುಗಳು ಗೋಚರಿಸಿದುವು. ರೇವಕ್ಕನ ಕಣ್ಣುಗಳ ಹೊಳಪು, ಹನುಮಣ್ಣನ ತನ್ಮಯತೆ, ಇವು ಅವನ ದೃಷ್ಟಿಯನ್ನು ಸೆಳೆದುವು.

"ಬಾರಣ್ಣ ಸಾಂತಣ್ಣ. ಕುಳಿತುಕೋ." ಹನುಮಣ್ಣ ಗೆಳೆಯನನ್ನು ಸಮೀಪಕ್ಕೆ ಕರೆದ. "ನೋಡು ನಿನ್ನ ರಾಣಿ ಸಾಮಾನ್ಯ ಹಾಡುಗಾತಿಯಲ್ಲ. ಅವಳು ಗಾನ ಸರಸ್ವತಿ. ಅವಳ ಸಂಗೀತ ನನ್ನ ಮೈಮರೆಸಿತು."

"ಅಣ್ಣಾ, ನೀವು ದೊಡ್ಡ ಮನಸ್ಸಿನಿಂದ ನನ್ನನ್ನು ಹೊಗಳಿ ದಿಣ್ಣೆಯನ್ನು ಬೆಟ್ಟ ಮಾಡುತ್ತಿರುವಿರಿ." ಎಂದು ರೇವಕ್ಕ ಗೋಣು ಅಲುಗಿಸಿದಳು.

ಹನುಮಣ್ಣ ಮಡದಿಯನ್ನು ಹೊಗಳಿದುದು ಸಾಂತಣ್ಣನಿಗೆ ಹಿತವೆನಿಸಲಿಲ್ಲ. ಆ ಹೊಗಳಿಕೆ ಮುಳ್ಳಿನಂತೆ ಅವನ ಎದೆಯನ್ನು ಚುಚ್ಚಿತು; ಅವನ ಅಂತರಂಗವೆಂಬ ಗುಹೆಯಲ್ಲಿ ಬಹುಕಾಲದಿಂದ ಮಲಗಿ ನಿದ್ರಿಸುತಿದ್ದ ಕಾಳ

ಸರ್ಪವನ್ನು ತಿವಿದು ಎಚ್ಚರಗೊಳಿಸಿತು. ಅಸೂಯೆಯ ಕರಿ ನೆರಳು ಅವನ ಚಿತ್ತವನ್ನು ಮುಸುಕಿತು. ಅವನ ಸಂಶಯಾಕುಲಚಿತ್ತ "ಹನುಮಣ್ಣ ರೇವಕ್ಕನನ್ನು ಪ್ರೀತಿಸುತ್ತಿರುವನು; ಆಕೆ ಅವನಿಗೆ ಒಲಿದಿರುವಳು." ಎಂದು ಗೊಣಗಿತು.

ಮತ್ಸರ ಮತ್ತು ಸಂಶಯಗಳು ಒಡಹುಟ್ಟಿದವುಗಳು. ಒಮ್ಮೆ ಅಂತ ರಂಗದಲ್ಲಿ ಮತ್ಸರದ ಬೀಜ ನೊಳೆಯಿತೆಂದರೆ, ಅದರೊಡನೆ ಸಂಶಯವೂ ಕೊನರಿ ಕುಡಿಬಿಟ್ಟು ಹಬ್ಬುವುದು. ರೇವಕ್ಕ ಹನುಮಣ್ಣನಲ್ಲಿ ಸೋದರ ಪ್ರೇಮವನ್ನಿರಿಸಿರುವಳು; ತನ್ನನ್ನು ಸಂತೋಷಗೊಳಿಸಲೆಂದು ಗೆಳೆಯನೊಡನೆ ಒಡನಾಡುವಳು, ಅವನ ಮುಂದೆ ಹಾಡುವಳು. ಅವಳು ಪತಿ ಪ್ರೇಮದಿಂದಲೇ ಈ ಕೆಲಸಗಳನ್ನೆಲ್ಲಾ ಮಾಡುತ್ತಿರುವಳು, ಎಂಬ ಸತ್ಯವನ್ನು ಅವನ ಬುದ್ಧಿ ಗ್ರಹಿಸದೆ ಹೋಯಿತು. ಸಂಶಯದ ತಿಮಿರ ಕವಿದ ಅವನ ಕಣ್ಣುಗಳು ಯಥಾರ್ಥವನ್ನು ನೋಡಲಾರದೆ ಹೋದುವು.

"ನನ್ನ ಕೈಹಿಡಿದ ಮಡದಿ ಮೋಸ ಮಾಡಿದಳು. ಒಡಹುಟ್ಟಿದವನಂತಿದ್ದ ಗೆಳೆಯ ನನಗೆ ದ್ರೋಹ ಬಗೆದ. ಅವರ ವಿನೋದ, ಸಂಗೀತ, ಚದುರಂಗ ಇವೆಲ್ಲ ಅವರು ನನಗೆ ಬಗೆದ ದ್ರೋಹಕ್ಕೆ ಸಾಕ್ಷಿಗಳು." ಎಂದು ಸಾಂತಣ್ಣನ ಸಂದೇಹಗ್ರಸ್ತ ಚಿತ್ತ ನುಡಿಯತೊಡಗಿತು. ಮತ್ಸರದಿಂದ ಹುಟ್ಟಿದ ಆಲೋಚನೆ ಅದು ನಿಜವಾದುದೆಂದು ಸಾಧಿಸತೊಡಗಿತು.

ಸಾಂತಣ್ಣನ ಜೀವ ಚಿಂತೆಯ ತೆಕ್ಕೆಗೆ ಒಳಗಾಯಿತು. ಅವನ ಉಲ್ಲಾಸ ಹರ್ಷಗಳು ಮಾಯವಾದುವು. ಗೆಳೆಯನೊಡನೆ ಮಾತುಕತೆ ಚದುರಂಗ ಗಳು ಅವನಿಗೆ ಬೇಡವಾದುವು. ಅವನ ಮುಖ ಮ್ಲಾನವಾಯಿತು. ಕಣ್ಣುಗಳು ಕೆಂಪಡರಿದವು. ಮೈ ಬಿಸಿಯೇರತೊಡಗಿತು. ಪತಿಯು ಎಂದಿನಂತಿಲ್ಲದು ದನ್ನು ಕಂಡು ರೇವಕ್ಕ "ಮೈ ಚೆನ್ನಾಗಿಲ್ಲವೇ? ರಾಜ್ಯಕಾರ್ಯಗಳ ಚಿಂತೆ ಯಿಂದ ನೀವು ಸೊರಗಿ ಕಪ್ಪಿಟ್ಟಯಾಗುತಿರುವಿರಿ." ಎಂದು ನುಡಿದಳು.

"ಏನೂ ಆಗಿಲ್ಲ. ಮೈ ಚೆನ್ನಾಗಿಯೇ ಇದೆ." ಎಂದು ಸಾಂತಣ್ಣ ಬೇಸರದ ದನಿಯಲ್ಲಿ ಹೇಳಿದ.

"ಹಣೆ ಬೆಂಕಿಯಂತೆ ಸುಡುತಿದೆ. ನಿಮಗೆ ಜ್ವರಬಂದಿದೆ." ಸಾಂತಣ್ಣನ ಹಣೆಯನ್ನು ಮುಟ್ಟಿನೋಡಿದ ರಾಣಿ ಉಸುರಿದಳು. "ಅರಮನೆಯ ಪಂಡಿತ ರನು ಕರೆಯಕಳುಹುವೆನು."

"ಏನೂ ಬೇಡ. ನನಗೆ ಏನಾದರೇನು?" ಕಿನಿಸುತುಂಬಿದ ನುಡಿ ಸಾಂತಣ್ಣನ ತುಟಿಗಳನ್ನು ಬಿರಿದುಬಂದಿತು.

ಈ ನುಡಿ ಕೂರಲಗಿನಂತೆ ರಾಣಿಯ ಎದೆಗೆ ನಾಟಿತು. ಪತಿಯೇಕೆ ತನ್ನ ಮೇಲೆ ಅಕಾರಣವಾಗಿ ಕೋಪ ತಾಳಿದನೆಂಬುದು ಅವಳಿಗೆ ತಿಳಿಯದಾಯಿತು. ಪತಿಯ ಮೈಯಲ್ಲ ಚೆನ್ನಾಗಿಲ್ಲದಿರುವುದು, ಮನವಾಗಿದೆ ಎಂಬುದು ಆಕೆಗೆ ಅರಿವಾಗಿದ್ದರೆ, ಅವಳು ಸಾಂತಣ್ಣನ ಕಣ್ಣುಗಳಿಗೆ ಅಂಜನಹಾಕಿ, ಅವನನ್ನು ಸೋಂಕಿದ ಸಂದೇಹ ಪಿಶಾಚಿಯನ್ನು ಹೊಡೆದೋಡಿಸಲು ಪ್ರಯತ್ನಿಸುತ್ತಿದ್ದಳು. ಆದರೆ ಪತಿಯನ್ನು ಬಾಧಿಸಿದ ರೋಗವೇನೆಂಬುದನ್ನು ಅವಳು ತಿಳಿಯಳು. ಅರಮನೆಯ ವೈದ್ಯರೂ ಕಂಡುಹಿಡಿಯಲಾರರು. ಆದರೆ ಆ ಕುತ್ತದಿಂದೊದಗಿದ ಸಂಕಟಗಳನ್ನು ಸಾಂತಣ್ಣನೊಬ್ಬನೇ ಅಲ್ಲ ಅನುಭವಿಸಬೇಕಾಗಿ ಬಂದುದು; ರೇವಕ್ಕನೂ ಆ ಅಗ್ನಿಜ್ವಾಲೆಗೆ ಮೈಯನ್ನೊಡ್ಡಬೇಕಾಗಿ ಬಂತು.

---

## ನಾಲ್ಕು

ಸಾಂತಣ್ಣನಿಗೆ ಇರುಳು ನಿದ್ದೆ ಬಾರದಾಯಿತು. ಅವನ ಎದೆಯೊಳಗೆ ನುಸುಳಿದ ಸಂಶಯಕೀಟ ಭೂತಾಕಾರವನ್ನು ತಳೆಯಿತು. ಅವನ ವಿವೇಕ ವಿವೇಚನೆಗಳು ಅಸ್ತಂಗತವಾದುವು. ಕೈಹಿಡಿದ ಮಡದಿ ದ್ರೋಹ ಬಗೆದಳು. ಗೆಳೆಯನು ತನ್ನನ್ನು ಬೆನ್ನಲ್ಲಿ ತಿವಿದ; ಜೀವದ ಮಿತ್ರನಾದವನು ಹಗೆಯಾದ; ಎಂದು ಅವನ ಚಿತ್ತ ಮೆಲುಕುಹಾಕತೊಡಗಿತು.

ಅಸೂಯೆ ಸಂಶಯಕ್ಕೆ ದಾರಿಮಾಡಿಕೊಟ್ಟಿತು, ಸಂಶಯ ದೋಷವನ್ನು ನೆಟ್ಟು ನೀರೆರೆಯಿತು. ಒಲವಿನ ಮಲ್ಲಿಗೆಯನ್ನು ಮುಳ್ಳುಬಳ್ಳಿಯೊಂದು ಆವರಿಸಿತು. ಸಾಂತಣ್ಣನ ಹೃದಯದಲ್ಲಿ ಹುಟ್ಟಿದ ದ್ವೇಷಾಗ್ನಿ ಅವನ ಅಂತರಂಗವನ್ನು ದಹಿಸಿದುದಲ್ಲದೆ, ಇತರರನ್ನೂ ಆಹುತಿ ತೆಗೆದುಕೊಳ್ಳಲು ತವಕಗೊಂಡಿತು.

ವೀರಣ್ಣ, ಹೊನ್ನಹಳ್ಳಿಯ ಅರಸನ ಆಸ್ಥಾನದ ವಯೋವೃದ್ಧ ಸರದಾರನಾಗಿದ್ದ. ಅವನು ಸಾಂತಣ್ಣನ ಮಂತ್ರಿಗಳಲ್ಲಿ ಒಬ್ಬನೂ, ದಂಡನಾಯಕನೂ ಆಗಿದ್ದ. ಹೊನ್ನಹಳ್ಳಿಯ ಗದ್ದುಗೆಯಲ್ಲಿ ಅಪಾರ ನಿಷ್ಠೆ ಅವನಿಗಿದ್ದಿತು. ಪ್ರಜಾಪಾಲನೆಯಲ್ಲಿ ಆತನು ನುರಿತವನಾಗಿದ್ದಂತೆ, ಶಸ್ತ್ರವಿದ್ಯೆಯಲ್ಲಿಯೂ

ಆತ ಪರಿಣತನಾಗಿದ್ದ. ಸಾಂತಣ್ಣನ ತಂದೆ ಮಾದೇನಾಯಕನ ಆಳ್ವಿಕೆಯ ಕಾಲದಲ್ಲಿ ಆತ ಹೊನ್ನಹಳ್ಳಿಯ ಸಂರಕ್ಷಣೆಗೋಸುಗ, ಅನೇಕ ಕಾಳಗಗಳಲ್ಲಿ ತನ್ನ ಜೀವವನ್ನು ಪಣವೊಡ್ಡಿ, ಗೆಲ್ಲುವೆಣ್ಣನ್ನು ಸೆರೆಹಿಡಿದು ತಂದಿದ್ದ; ನಾಡನ್ನು ಹಗೆಗಳಿಂದ ಕಾಪಾಡಿದ್ದ. ವೀರಣ್ಣನ ಕೈಯಲ್ಲಿ ಕರವಾಳವಿರುವನಕ ಹೊನ್ನ ಹಳ್ಳಿಯ ಕಡೆಗೆ ಹಗೆಗಳು ತಲೆಹಾಕರು ಎಂಬುದು ಮನೆಮನೆಗಳಲ್ಲಿ ಕೇಳಿ ಬರುವ ಮಾತಾಗಿದ್ದಿತು. ಅಧಿಕಾರಿಗಳು ಲಂಚ ಸುಲಿಗೆಗಳಿಗೆ ಕೈಯಿಕ್ಕಿ ಪೀಡಿಸ ದಂತೆ, ಅವನು ಕಟ್ಟುನಿಟ್ಟುಗಳನ್ನು ಏರ್ಪಡಿಸಿದ್ದ. ಪ್ರಜೆಗಳ ಸುಖ ಸಂತೋಷಗಳಿಗಿಂತ ಮಿಗಿಲಾದ ಭದ್ರತೆ ಸಿಂಹಾಸನಕ್ಕೆ ಇಲ್ಲವೆಂಬ ಯಥಾರ್ಥ ವನ್ನು ಅರಸನಿಗೆ ತಿಳುಹಿ ಆತ ಪ್ರಜಾಕ್ಷೇಮದಲ್ಲಿ ಲಕ್ಷ್ಯವಿಡುವಂತೆ ಪ್ರೇರಿಸುತಿದ್ದ.

ಸಾಂತಣ್ಣ ಅರಸನಾದ ಮೇಲೂ ಆಸ್ಥಾನದಲ್ಲಿ ವೀರಣ್ಣನ ಪ್ರಭಾವ ಕಡಿಮೆಯಾಗಲಿಲ್ಲ. ಅರಸನು ಮತ್ಸರದ ಮೂಟೆಯಾದರೂ, ವೀರಣ್ಣನ ಅಳವನ್ನು ಅರಿತಿದ್ದ. ಆದುದರಿಂದ ಹಿರಿಯ ಸೇನಾನಿಯ ಸಲಹೆಯಂತೆ ರಾಜ್ಯಭಾರವನ್ನು ಎಸಗುತಿದ್ದ. ಅರಸನು ತರುಣನೂ, ಅನನುಭವಿಯೂ ಆಗಿದ್ದರೂ ಸಹ, ಅವನ ಬೆಂಗಾವಲಿಗೆ ವೀರಣ್ಣನ ನಿಡುದೋಳು ಇದ್ದುದ ರಿಂದ ಹಗೆಗಳು ಹೊನ್ನಹಳ್ಳಿಯ ಕಡೆ ಅಡಿಯಿಡಲು ಸಾಹಸವಿಲ್ಲದವರಾದರು.

ಅಂದು ವೀರಣ್ಣ ಮಂತಣದ ಸಾಲೆಗೆ ಬಂದಾಗ, ಸಾಂತಣ್ಣ ಖಿನ್ನ ಮನಸ್ಕನಾಗಿ ಒಬ್ಬನೇ ಕುಳಿತಿದ್ದ ವೀರಣ್ಣ ಪದ್ಧತಿಯಂತೆ ಅರಸನಿಗೆ ಅಭಿವಾದನೆ ಮಾಡಿದ. ಅರಸನು ಪೀಠವನ್ನು ತೋರಿಸಿ, ಭಾರವಾದ ಸ್ವರದಲ್ಲಿ "ಕುಳಿತುಕೊ ವೀರಣ್ಣ" ಎಂದು ನುಡಿದ.

ಪೀಠದಲ್ಲಿ ಆಸೀನನಾದ ವೀರಣ್ಣ ರಾಜನ ಮೋರೆಯನ್ನೊಮ್ಮೆ ದೃಷ್ಟಿಸಿ ನೋಡಿದ. ಅರಸನು ಬಹಳ ಸೊರಗಿಹೋಗಿರುವಂತೆ ಅವನಿಗೆ ಕಾಣಿಸಿತು. ಅವನ ಮೋರೆ ಸುಟ್ಟ ಹಪ್ಪಳದಂತೆ ಕಳೆಗುಂದಿದ್ದಿತು. ಕಣ್ಣುಗಳು ಉರಿಯುವ ಕೆಂಡಗಳಾಗಿದ್ದುವು. ಹಣೆಯ ಮೇಲೆ ಚಿಂತೆಯ ಗೆರೆಗಳು ಎದ್ದು ಕಾಣುತ್ತಿದ್ದುವು. ಅರಸನ ಇರವು ಆತನು ಯಾವುದೋ ಒಂದು ವಿಷಮ ಚಕ್ರಕ್ಕೆ ಸಿಲುಕಿರುವನೆಂಬುದನ್ನು ಸೂಚಿಸಿತು.

"ಮಹಾಸ್ವಾಮಿಯವರು ಕುಶಲವಷ್ಟೆ." ವೀರಣ ಮಾತಿಗೆ ಮುನ್ನುಡಿ ಯನ್ನು ಹಾಕಿದ.

"ಮನೆಯೇ ಹಾವಿನ ಹುತ್ತವಾಗಿರುವಾಗ ಕುಶಲವೆಲ್ಲಿ ಬಂತು?" ಎಂದು ಸಾಂತಣ್ಣ ಉದ್ಗಾರವೆತ್ತಿದ.

'ಹಾವಿನ ಹುತ್ತ!' ವೀರಣ್ಣನ ಮುಖ ವಿಸ್ಮಯವನ್ನು ತಾಳಿತು.

"ಹೌದು. ಭದ್ರವಾದ ಎಡೆಯೆಂದು ಮನೆಗಟ್ಟಲು ತಳಪಾಯ ಹಾಕಿದೆ. ಗೋಡೆಗಳನ್ನು ಕಟ್ಟಿದೆ. ಮಾಡನ್ನು ಏರಿಸಿದೆ. ಇನ್ನು ಮಳೆಬಿಸಿಲು, ಚಳಿಗಾಳಿಗಳ ಬಾಧೆಯಿಲ್ಲದೆ ನೆಮ್ಮದಿಯಾಗಿರಬಹುದೆಂದು ನಂಬಿದೆ. ಆದರೆ ನನ್ನ ನಂಬಿಕೆಯೆಲ್ಲ ಹುಸಿಯಾಯಿತು. ನಾನು ಕಟ್ಟಿದ ಮನೆಯೇ ಕಾಳ ಸರ್ಪದ ವಸತಿಯಾಯಿತು."

"ನಿಮಗೆ ಎರಡು ಬಗೆದ ದುಷ್ಟನಾರೆಂಬುದನ್ನು ತಿಳಿಸಿ."

"ಹೇಳಿ ಪ್ರಯೋಜನವೇನು ವೀರಣ್ಣ?" ಅರಸನ ತುಟಿಗಳಿಂದ ಬೇಸರದ ದನಿ ಹೊರಟಿತು: "ನನ್ನ ಕಣ್ಣುಗಳೇ ನನ್ನನ್ನು ಮೋಸಗೊಳಿಸಿದುವು. ನನ್ನ ಕಿವಿಗಳೇ ನನ್ನನ್ನು ವಂಚಿಸಿದುವು."

ಅನಿತರಲ್ಲಿ ಸಂಗೀತಶಾಲೆಯಿಂದ ಕಾಳಿದಾಸನ ಮೇಘದೂತದ ಶ್ಲೋಕ ವೊಂದು ಗಾಳಿಯಲ್ಲಿ ತೇಲಿಬಂತು. ಆ ಮಧುರ ಗೀತೆ ಸಾಂತಣ್ಣನ ಕಿವಿ ಗಳನ್ನು ಪ್ರವೇಶಿಸಿದಾಗ,—ಅವನ ಹೃದಯವನ್ನು ಈಟಿಯಿಂದ ಇರಿದಂತಾ ಯಿತು. ಆದರೆ ಗೀತೆಯ ಸೊಬಗು ವೀರಣ್ಣನ ಚಿತ್ತವನ್ನು ಆಕರ್ಷಿಸಿತು; ಅವನ ಜೀವವನ್ನು ಎತ್ತರದ ಲೋಕಕ್ಕೆ ಒಯ್ದಿತು; ಅವನ ಜೀವ ನಲಿವು ಸೊಬಗುಗಳ ನಾಡಿನಲ್ಲಿ ನಲಿದಾಡಿತು.

ಹರಿದು ಬರುವ ಗಾನಪ್ರವಾಹ ನಿಂತಿತು. ವೀರಣ್ಣನ ಜೀವ ಮುಗಿಲ ಮಂಡಲದಿಂದ ಕೆಳಗೆ ಇಳಿಯಿತು. ಅವನು "ರಾಣಿಯವರು ಅದ್ಭುತವಾಗಿ ಹಾಡುತ್ತಿರುವರು!" ಎಂಬ ಉದ್ಗಾರವನ್ನೆತ್ತಿದ.

"ಹೌದು, ರಾಣಿಯವರ ಹಾಡು ಅದ್ಭುತವಾಗಿದೆ!"

ಅರಸನ ನುಡಿಯಲ್ಲಿ ಹುದುಗಿದ ವ್ಯಂಗ್ಯ ವೀರಣ್ಣನಿಗೆ ಅರಿವಾಗಲಿಲ್ಲ. ಅರಸನು ಹಾಡನ್ನು ಮೆಚ್ಚಿಯೇ ಹಾಗೆ ನುಡಿದನೆಂದು ಆ ಹಿರಿಯ ಭಾವಿಸಿದ.

"ರಾಣಿಯ ಸಂಗೀತವನ್ನು ಕೇಳಿ ಮೆಚ್ಚಲು ರಸಿಕನೊಬ್ಬನಿರುವನು."

"ನಿಮಗಿಂತ ಮಿಗಿಲಾದ ರಸಿಕರು ಯಾರಿರುವರು?"

"ಆ ರಸಿಕನು ನಾನಲ್ಲ. ಆತ ಗಂಗವಳ್ಳಿಯ ಅರಸು."

"ಹೌದು. ಗಂಗವಳ್ಳಿಯ ಅರಸರು ಇಲ್ಲಿ ಅತಿಥಿಗಳಾಗಿರುವುದನ್ನೇ

ನುರಿತಿದ್ದೆ." ವೀರಣ್ಣ ಮಾರ್ನುಡಿದ: "ಅವರು ಗಾನವಿದ್ಯೆಯಲ್ಲಿ ವಿಶಾರದ ರೆಂದು ನಾನು ಕೇಳಿದ್ದೇನೆ. ರಾಣಿಯವರು ಅವರ ಮುಂದೆ ಹಾಡಿ ತಮ್ಮ ಗಾಯನಕಲೆಯನ್ನು ಒರೆಗೆ ಹಚ್ಚುತ್ತಿರಬಹುದು."

"ಗಂಗವಳ್ಳಿಯ ಅರಸು ರಾಣಿಯ ಸಂಗೀತವನ್ನು ಮಾತ್ರವಲ್ಲ ಒರೆಗೆ ಹಚ್ಚುತ್ತಿರುವುದು; ಅವರು ನನ್ನನ್ನೂ ಒರೆಗೆ ಹಚ್ಚಿ ತೀಡುತ್ತಿರುವರು. ಅವರೇಕೆ ತಮ್ಮ ನಾಡಿಗೆ ಪಯಣವನ್ನು ಕೈಗೊಳ್ಳಲಿಲ್ಲ?"

"ನಿಮ್ಮ ಕೋರಿಕೆಯಂತೆ."

"ಆದರೆ ನನ್ನ ಅಪೇಕ್ಷೆಯನ್ನು ಕಿವಿಗಳಿಗೆ ಹಾಕಿಕೊಳ್ಳದೆ, ಸ್ವದೇಶಕ್ಕೆ ಮರಳಿಯೇ ತೀರುವೆನೆಂದು ಹಟ ಹಿಡಿದ" ಶಾಂತಣ್ಣ ತನ್ನ ಸಂಶಯದ ಕಡಿತವನ್ನು ಬಿಚ್ಚತೊಡಗಿದ: "ಆದರೆ ರಾಣಿ ಪ್ರಾರ್ಥಿಸಿದಾಗ ಆತನ ಸಂಕಲ್ಪವೆಲ್ಲ ಕಿಚ್ಚಿನಲ್ಲಿ ಕಾಸಿದ ಲೋಹದಂತೆ ಮಿದುವಾಯಿತು."

"ಹೆಂಗಸರು ವಿನಂತಿಸಿದಾಗ ಗಂಡಸು ಬಾಗುವುದು ಸಹಜ" ವೀರಣ್ಣ ನಿಗೆ ಅರಸರ ನುಡಿಯಲ್ಲಿ ಹುದುಗಿದ ಸಂದೇಹದ ಅರಿವಾಗಲಿಲ್ಲ. "ರಾಣಿಯ ವರು ತಮ್ಮ ಪರವಾಗಿ ಬೇಡಿಕೊಂಡರು. ಅದನ್ನು ತಿರಸ್ಕರಿಸುವುದು ಗಂಗ ವಳ್ಳಿಯ ಪ್ರಭುಗಳಿಗೆ ಅಸದಳವೆನಿಸಿತು."

"ವೀರಣ್ಣ, ನನಗೋಸ್ಕರ ಗಂಗವಳ್ಳಿಯ ದೊರೆ ಇಲ್ಲಿ ತಳವೂರಿಲ್ಲ. ರಾಣಿ ಗೋಸ್ಕರ ತಳವೂರಿದ್ದಾನೆ!"

ದೊರೆಯಾಡಿದ ಮಾತು ಕಾದ ಸೀಸದಂತೆ ವೀರಣ್ಣನ ಕಿವಿಗಳಲ್ಲಿ ಪ್ರವೇ ಶಿಸಿತು. ಅರಸನ ಧ್ವನಿಯಾದರೂ ನಿಷ್ಠುರಯುಕ್ತವಾಗಿದ್ದಿತು. ವೀರಣ್ಣ ಭಯವಿಸ್ಮಯಗಳಿಂದ ಒಂದು ಕ್ಷಣ ಮರವಟ್ಟು ಹೋದ. ಅವನು ರಾಜನ ಮೋರೆಯನ್ನೇ ಒಂದು ಕ್ಷಣ ದಿಟ್ಟಿಸಿನೋಡಿದ. ತಾನು ನೋಡುತ್ತಿರುವುದು ಅರಸನನ್ನಲ್ಲ; ದ್ವೇಷಮಾತ್ಸರ್ಯಗಳ ನೆಲೆಮನೆಯೆನಿಸಿದ ಒಂದು ಭೀಕರ ಭೂತವನ್ನು ನೋಡುತ್ತಿರುವೆನು ಎಂದು ಅವನಿಗೆ ಅನಿಸಿತು.

"ವೀರಣ್ಣ, ನನ್ನನ್ನು ಹಾಗೇಕೆ ನೋಡುತ್ತಿರುವೆ?" ದೊರೆ ದಂಡ ನಾಯಕನನ್ನು ಪ್ರಶ್ನಿಸಿದ.

"ಮಹಾಪ್ರಭು, ನಿಮ್ಮ ಮಾತಿನ ಹೊಲಬು ನನಗಾಗಲಿಲ್ಲ."

"ನಾನು ನಾಲ್ಕುದಿನ ಹೆಚ್ಚು ನಿಲ್ಲೆಂದರೂ ಹನುಮಣ್ಣ ಒಪ್ಪಲಿಲ್ಲ. ಆದರೆ ರಾಣಿ ತುಟಿತೆರೆದೊಡನೆಯೇ, ಅವನ ಸಂಕಲ್ಪ ಮರಳಿನಿಂದ ಕಟ್ಟಿದ

ಕೋಟೆಯಾಯಿತು. ನಾನಿಲ್ಲಿ ಮಂತಣದಶ ಾಲೆಯಲ್ಲಿ ಚಿಂತಿಸಿ ತಲೆಹುಣ್ಣು ಮಾಡಿಕೊಳ್ಳುತ್ತಿರುವಾಗ ರಾಣಿ ಸಂಗೀತ ಶಾಲೆಯಲ್ಲಿ ಹಾಡುತ್ತಿರುವಳು. ವಿಹಾರಮಂದಿರದಲ್ಲಿ ಅವಳು ಹನುಮಣ್ಣನೊಡನೆ ಚದುರಂಗ ಆಡುವಳು. ಅರಸನ ನಗು ಅಲೆ ಅಲೆಯಾಗಿ ಏಳುವುದು. ರಾಣಿ ಮುಗುಳ್ನಗೆಗಳು ತುಂಬಿದ ಬೊಗಸೆಯನ್ನು ಆತನಿಗೆ ಒಡ್ಡುವಳು. ಇವುಗಳ ರಹಸ್ಯವೇನು?

"ಮಹಾಸ್ವಾಮಿ ನನಗೆ ಅರಿವಾಗುವುದಿಲ್ಲ." ವೀರಣ್ಣ ವಿಸ್ಮಯದಿಂದ ಉದ್ಗಾರವೆತ್ತಿದ.

"ವೀರಣ್ಣ, ನಿನ್ನ ಬುದ್ಧಿವಂತಿಕೆಯೆಲ್ಲ ಏನಾಯಿತು? ಅವರ ಸಂಗೀತ, ವಿನೋದ ಮತ್ತು ವಿಹಾರಗಳು ಏನನ್ನು ಸೂಚಿಸುತ್ತಿವೆಯೆಂದು ತಿಳಿದಿರುವೆ?" ಸಾಂತಣ್ಣ ಬಿಸಿಯುಸಿರೊಂದನ್ನು ಬಿಟ್ಟು, ಮಾತು ಮುಂದುವರಿಸಿದ: "ನನಗೂ ಬುದ್ಧಿಯಿದೆ. ಅವರು ಮಾಡಿದ ಬಯಲಾಟದ ಗುಟ್ಟನ್ನು ತಿಳಿಯಬಲ್ಲೆ. ಆದರೆ ಅದು ನಿಜವೇ? ಎಂದು ನನಗೂ ಸಂದೇಹವಾಗುವುದು. ನನಗೆ ಮರುಳು ಕವಿದಂತಾಗುವುದು."

"ನೀವು ಶೋಧಿಸಿದ ರಹಸ್ಯವೇನು?" ಕೌತುಕದಿಂದ ವೀರಣ್ಣ ಕೇಳಿದ.

"ನೋಡು, ನನ್ನ ಮನೆಯೊಳಗೆ ಅತಿಥಿಯಾಗಿ ನುಗ್ಗಿದವನು ಹಗೆಯಾದ. ಹೂವೆಂದು ಮುಡಿಯಲ್ಲಿ ಸೂಡಿದುದು ಹಾವಾಯಿತು. ಹನುಮಣ್ಣ ನನ್ನ ಮೋರೆಗೆ ಅವಮಾನದ ಮಸಿಯನ್ನು ಬಳಿದ. ನನ್ನನ್ನು ಕಲಂಕದ ಮಡುವಿನಲ್ಲಿ ದೂಡಿದ."

ಎಂದು ಸಾಂತಣ್ಣ ದಂಡನಾಯಕನ ಮುಂದೆ ತನ್ನ ಸಂಶಯದ ಸುರಳಿಯನ್ನು ಬಿಚ್ಚಿ ವಿವರಿಸಿದ; ಗೆಳೆಯ ತನ್ನ ಮನದನ್ನೆಯನ್ನು ಪ್ರೀತಿಸುತ್ತಿರುವನೆಂದೂ, ರೇವಕ್ಕ ಅವನ ಒಲವನ್ನು ಪುರಸ್ಕರಿಸಿರುವಳೆಂದೂ ಅರುಹಿದ.

ದೊರೆಯ ನುಡಿಗಳನ್ನು ಕೇಳಿ ವೀರಣ್ಣನಿಗೆ ಆಶ್ಚರ್ಯವಾಯಿತು. ವಿವೇಕಿಯಾದ ಅರಸನ ತುಟಿಗಳಿಂದ ಈ ಬಗೆಯ ಮಾತುಗಳು ಹೊರಟು ಬರುತ್ತಿವೆ ಎಂಬುದನ್ನು ಅವನು ನಂಬದೆ ಹೋದ. ಆ ರಾಜಭಕ್ತ, ರೇವಕ್ಕನ ಗುಣಶೀಲಗಳನ್ನು ಬಲ್ಲ; ಆಕೆ ಕಿಲುಬು ಸೋಂಕದ ಚೊಕ್ಕ ಬಂಗಾರವೆಂಬುದನ್ನು ಅರಿತಿದ್ದ.

"ಏಕೆ ವೀರಣ್ಣ ನೀನು ಮೌನವಾಗಿರುವೆ?" ದುಗುಡದಿಂದ ದೊರೆ ಪ್ರಶ್ನಿಸಿದ. "ನೀನೂ ನನ್ನ ಮಾತನ್ನು ನಂಬುವುದಿಲ್ಲ. ನನ್ನ ನುಡಿಯನ್ನು ಯಾರೂ ನಂಬರು!"

"ಇದು ಕೇವಲ ನಂಬಿಕೆಯ ಮಾತಲ್ಲ. ನನ್ನೊಡೆಯ." ವೀರಣ್ಣನ ಅಗಲವಾದ ಹಣೆಯ ಮೇಲೆ ಆಲೋಚನೆಯ ಗೆರೆಗಳು ತೋರಿದುವು. "ರಾಣಿಯವರನ್ನು ಎಳವೆಯಿಂದಲೂ ನಾನು ಬಲ್ಲೆ. ಅವರ ಉತ್ತಮಗುಣಗಳು ಹೊನ್ನಹಳ್ಳಿಯ ಪ್ರತಿಯೊಂದು ಮನೆಯ ಮಾತಾಗಿವೆ. ತಾಯಂದಿರು ನೀನು ರಾಣಿ ರೇವಕ್ಕನಂತಿರು ಎಂದು ತಮ್ಮ ಮಗಳಂದಿರನ್ನು ಹರಸುತ್ತಾರೆ. ಅಂತಹವರು ಜಾರುವ ದಾರಿಯಲ್ಲಿ ಹಜ್ಜೆ ಇರಿಸುವರೇ?"

"ವೀರಣ್ಣ,-ನೀನೂ ನನ್ನನ್ನು ನಂಬುವುದಿಲ್ಲ. ನೀನೂ ದ್ರೋಹಿಯ ಪಕ್ಷವನ್ನು ಸೇರಿರುವೆ. ನೀನು ಉಂಡ ಮನೆಗೆ ಎರಡು ಬಗೆಯುತ್ತಿ!"

"ಮಹಾ ಸ್ವಾಮಿಯವರು ಅಂತಹ ಮಾತುಗಳನ್ನಾಡಬಾರದು," ಆವೇಶ ಬೆರೆತ ಗಂಭೀರ ಸ್ವರದಲ್ಲಿ ವೀರಣ್ಣ ಪಡಿನುಡಿದ. "ನಲುವತ್ತಕ್ಕಿಂತಲೂ ಹೆಚ್ಚು ವರ್ಷ ನಾನು ಹೊನ್ನ ಹಳ್ಳಿಯ ಸಿಂಹಾಸನಕ್ಕೆ ಸೇವೆ ಸಲ್ಲಿಸಿದ್ದೇನೆ. ಹೊನ್ನ ಹಳ್ಳಿಯ ಕೀರ್ತಿಗೌರವಗಳನ್ನು ಕಾಯಲು ನನ್ನ ಪ್ರಾಣವನ್ನು ಪಣವೊಡ್ಡಿದ್ದೇನೆ. ಪ್ರಭುಗಳು ನನ್ನನ್ನು ದ್ರೋಹಿಯೆಂದು ಬಗೆಯುವುದಾದರೆ, ನಿಮ್ಮ ಕೈಯಲ್ಲಿ ಖಡ್ಗವಿದೆ; ಅದರಿಂದ ನನ್ನ ರುಂಡವನ್ನು ಚೆಂಡಾಡಿಬಿಡಿ!"

"ನಿನ್ನ ನಿಷ್ಠೆಯಲ್ಲಿ ನನಗೆ ಅಪನಂಬಿಕೆಯಿಲ್ಲ. ನನ್ನಲ್ಲಿ ವಿಶ್ವಾಸವುಳ್ಳವನು ನೀನೊಬ್ಬನೇ ಆಗಿರುವೆ. ಆದುದರಿಂದಲೇ ಕಾರ್ಯಾಲೋಚನೆಗೆಂದು ನಿನ್ನನ್ನು ಕರೆಸಿದೆ." ಅರಸನ ನುಡಿ ಮೆದುವಾಯಿತು. ಆದರೆ ಸ್ವರವು ಭಾರವಾಗಿದ್ದಿತು. "ಹೊನ್ನಹಳ್ಳಿಯ ಸಿಂಹಾಸನಕ್ಕೆ ನೀನು ಹಿಂದೆ ಅನೇಕ ಸೇವೆಗಳನ್ನು ಸಲ್ಲಿಸಿರುವೆ. ಈಗ ಗದ್ದುಗೆ ನಿನ್ನಿಂದ ಮಹತ್ತರವಾದ ಒಂದು ಸೇವೆಯನ್ನು ಕೋರುವುದು."

"ಅಪ್ಪಣೆಯಾಗಲಿ ಪ್ರಭು."

"ನನ್ನ ಮಡದಿಯನ್ನು ಅಪಹರಿಸಲು ಹೊರಟ ಆ ಮಿತ್ರದ್ರೋಹಿಯನ್ನು ನೀನು ಇಲ್ಲವಾಗಿಸಬೇಕು!"

ರಾಜಾಜ್ಞೆ ಸುರಗಿಯಂತೆ ವೀರಣ್ಣನ ಎದೆಯನ್ನು ಭೇದಿಸಿತು. ಅವನ ಮೊಗ ಬಿಳುಪೇರಿತು. ಪಾದಗಳಡಿಯ ನೆಲಕುಸಿದು ತಾನು ಪಾತಾಳಕ್ಕೆ ಇಳಿದಂತಾಯಿತು. ಒಂದು ಕ್ಷಣ ಅವನು ಮಾತಾಡದೆ ಸ್ತಬ್ಧನಾಗಿ ನಿಂತ.

"ಏನು ವೀರಣ್ಣ, ನನ್ನ ಆಜ್ಞೆಯನ್ನು ಈಡೇರಿಸುವುದಿಲ್ಲವೇ?" ನಿಷ್ಠುರ ಸ್ವರದಲ್ಲಿ ದೊರೆ ಪ್ರಶ್ನಿಸಿದ. "ನಾಳೆ ಸೂರ್ಯೋದಯವಾಗುವ ಮುನ್ನ

ಹನುಮಣ್ಣ ಯಮುನೂರನ್ನು ಸೇರಬೇಕು! ನನ್ನ ಅಪ್ಪಣೆಯನ್ನು ಶಿರಸಾವಹಿಸಿದರೆ ನಾನು ನಿನ್ನನ್ನು ಪುರಸ್ಕರಿಸುವೆನು."

"ಪುರಸ್ಕಾರದ ಮಾತೇಕೆ? ಪ್ರಭುಗಳ ಅಪ್ಪಣೆಯನ್ನು ಈಡೇರಿಸುವುದು ನನ್ನ ಹೊಣೆ."

"ಹನುಮಣ್ಣನನ್ನು ನಿನಗೊಪ್ಪಿಸಿದ್ದೇನೆ. ಅವನನ್ನು ಸಾವಿನ ನಾಡಿಗೆ ಕಳುಹಿಸುವುದು ನಿನ್ನ ಕೆಲಸ."

"ಪ್ರಭುವಿನ ಆಜ್ಞೆಯನ್ನು ನೆತ್ತಿಯಲ್ಲಿ ಆಂತೆ." ವೀರಣ್ಣ ಉಸುರಿದ.

ಸಾಂತಣ್ಣನ ಮೊಗದ ಮೇಲೆ ಸಂತಸದ ಬಿಸಿಲು ತೋರಿತು. ತನ್ನಾಜ್ಞೆಯನ್ನು ವೀರಣ್ಣ ಪುರಸ್ಕರಿಸುವನೆಂದು ಅವನು ಭರವಸೆ ತಾಳಿದ; ವೀರಣ್ಣನಿಗೆ ಉಡುಗೊರೆಗಳನ್ನು ಇತ್ತು ಸನ್ಮಾನಿಸಿ ಕಳುಹಿದ.

---

## ಐದು

ವೀರಣ್ಣ ಹೊನ್ನಹಳ್ಳಿಯ ಮನ್ನೆಯನನ್ನು ಇಲ್ಲವಾಗಿಸುವೆನೆಂಬ ಆಣತಿಯನ್ನು ನೆತ್ತಿಯ ಮೇಲೆ ಹೊತ್ತು ರಾಜಮಂದಿರದಿಂದ ಸ್ವಗೃಹಕ್ಕೆ ಮರಳಿದ. ನೆತ್ತಿಯಲ್ಲಿ ಹೊತ್ತ ರಾಜಾಜ್ಞೆ, ಮಸ್ತಕವನ್ನಡರಿದ ಮಲಯಾಚಲದಂತೆ ಭಾರವಾಗಿ ತೋರಿತು. ಗೆಳೆಯನ ಮಾತು ನಂಬಿ ಬೆಂಗಾವಲಿಗೆ ಭಟರನ್ನು ಸಹ ಕರೆದುಕೊಳ್ಳದೆ ಹೊನ್ನಹಳ್ಳಿಗೆ ಚಿತ್ತೈಸಿದ. ಗಂಗವಳ್ಳಿಯ ದೊರೆಯನ್ನು ವಧಿಸುವುದು ಮಿತ್ರದ್ರೋಹವಲ್ಲವೇ? ಹೊನ್ನಹಳ್ಳಿಯ ಹೆಸರಿಗೆ ಮಸಿ ಬಳಿಯುವ ರಾಕ್ಷಸ ವರ್ತನೆಯಲ್ಲವೇ?—ಎಂದು ದಂಡನಾಯಕನ ಚಿತ್ತ ಮೆಲುಕುಹಾಕತೊಡಗಿತು.

ವೀರಣ್ಣ ದಂಡನಾಯಕನಿಗೆ ಗಂಗವಳ್ಳಿಯ ಪ್ರಭುವಿನ ಪರಿಚಯ ಸಾಕಷ್ಟು ಇತ್ತು. ಹಿಂದೆ ಎರಡು ಮೂರು ಸಲ ಹೊನ್ನಹಳ್ಳಿಯ ರಾಯಭಾರಿಯಾಗಿ ಹನುಮಣ್ಣನ ಸಂಸ್ಥಾನಕ್ಕೆ ತೆರಳಿದ್ದ; ಅಲ್ಲಿ ನಾಲ್ಕಾರು ತಿಂಗಳು ನೆಲಸಿದ್ದ. ಆಗ ಅವನಿಗೆ ಗಂಗವಳ್ಳಿಯ ದೊರೆಯ ಉದಾತ್ತ ಗುಣಗಳ ಪರಿಚಯವಾಯಿತು. ಪ್ರಜೆಗಳೆಲ್ಲರೂ ಅವನನ್ನು ತಮ್ಮ ಪಾಲಿನ ದೇವರೆಂದು ಹೊಗಳುತಿದ್ದರು. ಜನರ ಹಿತಸಾಧನೆಗೋಸುಗ ಅವನ ಬಾಳುವೆ ಮೀಸಲಾಗಿದ್ದಿತು. ಪರಸತಿಯರ ಕಡೆಗೆ ಅವನು ಎಂದೂ ದೃಷ್ಟಿ ಹೊರಳಿಸಿದವನಲ್ಲ.

ಅವನ ಶೀಲದ ಹಿರಿಮೆಯನ್ನು ಸಾರಿ ಹೇಳುತಿದ್ದ ಅನೇಕ ಕತೆಗಳು ಜನರಲ್ಲಿ ಪಸರಿಸಿದ್ದುವು.

ಹನುಮಣ್ಣ ಪಾಪದ ಹಾದಿಯನ್ನು ಹಿಡಿಯಬಹುದೇ ಎಂದು ವೀರಣ್ಣನ ಮನಸ್ಸು ಸಂದೇಹಾಕುಲವಾಯಿತು. ದೊರೆಯ ಗಂಭೀರ ಮುಖದಲ್ಲಿ ಪಾಪದ ಸುಳಿವಿರಲಿಲ್ಲ. ಅವನ ಕಣ್ಣುಗಳಲ್ಲಿ ನಿಷ್ಕಾಪಟ್ಯ ತುಳುಕಾಡುತಿದ್ದಿತು. ಮಾತುಗಳಲ್ಲಿ ಕೊಂಕು ಕೃತ್ರಿಮಗಳ ಮುಳ್ಳುಗಳಿರಲಿಲ್ಲ. ಸಾಂತಣ್ಣ ಅವನ ಬಾಲ್ಯದ ಒಡನಾಡಿಯಾಗಿದ್ದುದರಿಂದ ರಾಜ್ಯಶಾಸನವನ್ನು ಬದಿಗಿರಿಸಿ ಹೊನ್ನಹಳ್ಳಿಗೆ ದಯಮಾಡಿಸಿದ್ದ. ಗೆಳೆಯನ ಮಡದಿಯನ್ನು ಸೋದರಿಯೆಂದು ಭಾವಿಸಿ ಸಲುಗೆಯಿಂದ ವರ್ತಿಸುತಿದ್ದ. ಆಟ ವಿನೋದ ವಿಹಾರಗಳಲ್ಲಿ ಆಕೆಯೊಡನೆ ಪಾಲುಗಾರನಾಗುತಿದ್ದ.

ಈ ವರ್ತನೆಗಳಲ್ಲಿ ಪಾಪದ ಸುಳಿವಿದೆಯೋ ಎಂದು ವೀರಣ್ಣ ಸೂಕ್ಷ್ಮವಾಗಿ ಪರಿಶೀಲಿಸತೊಡಗಿದ; ಹುನುಮಣ್ಣ ಮತ್ತು ರೇವಕ್ಕ ಇವರ ನಡೆನುಡಿಗಳಲ್ಲಿ ಕಣ್ಣಿಟ್ಟು ನೋಡಿದ. ಅವನ ಪರಿಶೀಲನೆ ಅವರಿಬ್ಬರೂ ನಿಷ್ಪಾಪರರೆಂಬುದನ್ನು ಖಚಿತಗೊಳಿಸಿತು. ಅವರ ನಡೆನುಡಿಗಳಲ್ಲಿ ಅಣ್ಣ ತಂಗಿಯರ ವರ್ತನೆಗಳಲ್ಲಿ ಕಂಡುಬರುವುದಕ್ಕಿಂತ ವಿಶೇಷವಾದುದೇನನ್ನೂ ಅವನ ಕಣ್ಣುಗಳು ಕಾಣದಾದುವು.

ಅರಸನ ಮತ್ಸರಬುದ್ಧಿ ಬಹು ಹಿಂದಿನಿಂದಲೂ ವೀರಣ್ಣನಿಗೆ ಪರಿಚಯವಾದುದು. "ರಾಣಿ ತನ್ನ ಪತಿಗೆ ಸಂತೋಷವಾಗಲೆಂದು ಹನುಮಣ್ಣನೊಡನೆ ಸಲುಗೆಯಿಂದ ನಡೆದುಕೊಂಡುದು ಅರಸನ ಅಸೂಯೆಯನ್ನು ಕೆರಳಿಸಿರಬೇಕು; ಅಸೂಯೆ ಸಂಶಯವೆಂಬ ತುರುಚೆಯ ಗಿಡಕ್ಕೆ ನೀರೆರೆದು ಪೋಷಿಸಿರಬೇಕು; ಅರಸನ ಚಿತ್ತದಲ್ಲಿ ಬೇರುಬಿಟ್ಟ ಸಂದೇಹ ರೇವಕ್ಕ ಹನುಮಣ್ಣರ ಸಲುಗೆಗೆ ವಿಪರೀತಾರ್ಥವನ್ನು ಕಲ್ಪಿಸಿರಬೇಕು."

ಎಂದು ವೀರಣ್ಣ ಆಲೋಚಿಸಿದ. ಹನುಮಣ್ಣ ಪಾಪದ ಸೋಂಕಿಲ್ಲದ ನಿರಪರಾಧಿಯೆಂಬುದು ಅವನಿಗೆ ನಿಶ್ಚಯವಾಯಿತು. ತಾನೇನು ಮಾಡಬೇಕೆಂಬುದು ಅವನಿಗೆ ತಿಳಿಯದಾಯಿತು.

"ನೀನು ಆಳು. ಗಂಗವಳ್ಳಿಯ ದೊರೆಯನ್ನು ವಧಿಸೆಂದು ರಾಜಾಜ್ಞೆಯಾಗಿದೆ. ಧರ್ಮಾಧರ್ಮಗಳ ಪಾಪ ನಿನಗೇಕೆ?" ಎಂದು ಉಸುರಿತು ವೀರಣ್ಣನ ರಾಜನಿಷ್ಠೆ.

"ಹನುಮಣ್ಣ ನಿಷ್ಪಾಪಿ, ಆತ ಆದರ್ಶ ಪುರುಷ. ಅವನ ವಧೆಯಿಂದ ನಿನ್ನ ಕೈಗೆ ಅಂಟಿದ ಕಲಂಕ ಎಂದೂ ಅಳಿಯದು." ಎಂದು ನುಡಿಯಿತು ವೀರಣ್ಣನ ಧರ್ಮಬುದ್ಧಿ.

"ಒಡೆಯನ ಅಪ್ಪಣೆಯನ್ನು ನೆತ್ತಿಯಲ್ಲಿ ಹೊರುವುದು ಆಳಿನ ಕೆಲಸ." ಕರ್ತವ್ಯಬುದ್ಧಿ ಹೇಳಿತು.

"ಒಡೆಯನ ಹಿತವನ್ನು ಚಿಂತಿಸುವುದು ಸಹ ಆಳಿನ ಕೆಲಸ." ಧರ್ಮ ಬುದ್ಧಿ ಬೆಳಕನ್ನು ಹರಡಿತು. "ನೀನು ರಾಜಾಜ್ಞೆಯನ್ನು ಈಡೇರಿಸಿದರೆ, ನಿರಪರಾಧಿಯನ್ನು ಕೊಲೆಗೈದ ಅಪಕೀರ್ತಿ ನಿನಗೆ ಮಾತ್ರವಲ್ಲ, ನಿನ್ನ ಅರಸ ನಿಗೂ, ನಿನ್ನ ನಾಡಿಗೂ ಪ್ರಾಪ್ತವಾಗುವುದು. ಲೋಕದ ಜನರೆಲ್ಲ ಹೊನ್ನ ಹಳ್ಳಿಯ ಕಡೆ ಬೆರಳುತೋರಿಸಿ, ಆಮಂತ್ರಿತನಾಗಿ ಬಂದ ಅತಿಥಿಯನ್ನು ಕೊಲೆಗೈದ ದ್ರೋಹಿಗಳ ನಾಡಿದೆಂದು ಹೇಳದಿರರು!"

ವೀರಣ್ಣನ ಚಿತ್ತದಲ್ಲಿ ಸ್ವಾಮಿನಿಷ್ಠೆಗೂ ವಿವೇಕಕ್ಕೂ ಒಂದು ದೊಡ್ಡ ಕಾಳಗವೇ ನಡೆಯಿತು. ಈ ಹೋರಾಟದಲ್ಲಿ ವಿವೇಕವೇ ಗೆದ್ದಿತು. ಹನು ಮಣ್ಣನನ್ನು ವಧಿಸಿ ತನ್ನ ಸ್ವಾಮಿನಿಷ್ಠೆಯನ್ನು ತೋರುವುದಕ್ಕಿಂತ, ಅತಿಥಿಯ ಪ್ರಾಣವನ್ನು ಕಾಯುವುದೇ ಲೇಸೆಂಬ ನಿರ್ಧಾರಕ್ಕೆ ಅವನು ತಲುಪಿದ. ಅದರಿಂದಲೇ ತನ್ನ ನಾಡಿಗೂ ಸ್ವಾಮಿಗೂ ಹಿತವಿದೆ; ಅದೇ ಧರ್ಮಮಾರ್ಗ ಎಂದು ಆತ ನಂಬಿದ.

ಅಂದು ವೀರಣ್ಣ ಅರಮನೆಯ ಅತಿಥಿಗೃಹಕ್ಕೆ ತೆರಳಿದ. ಅತಿಥಿ ಸಾಲೆಯಲ್ಲಿ ಹನುಮಣ್ಣ ಚಿತ್ರಬರೆಯುವುದರಲ್ಲಿ ಮಗ್ನನಾಗಿದ್ದ. ವೀರಣ್ಣ ಬಂದನೆಂದು ದೊರೆ ಚಿತ್ರಬರೆಯುವುದನ್ನು ನಿಲ್ಲಿಸಲಿಲ್ಲ. ಅವನು ಕುಂಚದಿಂದ ಫಲಕದ ಮೇಲೆ ಬಣ್ಣಬರೆಯುತ್ತಾ "ದಂಡನಾಯಕರು ನಮಗೆ ದರ್ಶನ ಕೊಡುವುದೇ ಅಪರೂಪವಾಗಿದೆ. ದಯಮಾಡಿಸಬೇಕು; ಪೀಠವನ್ನು ಅಲಂಕ ರಿಸಬೇಕು." ಎಂದು ಆದರದಿಂದ ನುಡಿದ.

ವೀರಣ್ಣ ತೆರವಾದ ಪೀಠವೊಂದರ ಮೇಲೆ ಆಸೀನನಾದ. ಆದರೆ ಗಂಗ ವಳ್ಳಿಯ ದೊರೆ ಚಿತ್ರಲೇಖನವನ್ನು ನಿಲ್ಲಿಸಲಿಲ್ಲ. ರಾಜನು ಇಷ್ಟೊಂದು ಆಸಕ್ತಿಯಿಂದ ಯಾರ ಚಿತ್ರವನ್ನು ಬರೆಯುತ್ತಿರುವನೆಂಬ ಕುತೂಹಲ ದಂಡ ನಾಯಕನಲ್ಲಿ ಹುಟ್ಟಿತು. ಅವನು ಪೀಠದಿಂದ ಎದ್ದು ದೊರೆ ಬರೆಯುತ್ತಿರುವ ಚಿತ್ರವನ್ನು ದಿಟ್ಟಿಸಿನೋಡಿದ. ಅದು ಹೊನ್ನ ಹಳ್ಳಿಯ ರಾಣಿ ರೇವಕ್ಕನ ಚಿತ್ರವಾಗಿದ್ದಿತು!

ಗಂಗವಳ್ಳಿಯ ಅರಸು ರೇವಕ್ಕನ ಚಿತ್ರವನ್ನು ಬರೆಯುವುದನ್ನು ಕಂಡು ವೀರಣ್ಣನಿಗೆ ವಿಸ್ಮಯವಾಯಿತು. ಸಾಂತಣ್ಣನ ಸಂಶಯ ನಿಜವಾಗಿರಬಹುದೇ ಎಂಬ ಆಲೋಚನೆ ಅವನ ಅಂತರಂಗದಲ್ಲಿ ಸುಳಿಯಿತು. "ಪ್ರಭುಗಳು ಚಿತ್ರ ಲೇಖನದಲ್ಲಿ ಬಹು ಆಸಕ್ತರಾಗಿರುವಿರಿ" ಎಂದು ಅವನು ನುಡಿದ.

"ಹೌದು. ಇನ್ನು ನಾಲ್ಕಾರು ದಿನಗಳಲ್ಲಿ ಚಿತ್ರವನ್ನು ಬರೆದು ಮುಗಿಸ ಬೇಕಾಗಿದೆ"

"ಏಕೆ ಅಷ್ಟು ಆತುರ?"

"ರಾಣಿಯ ಕೋರಿಕೆಯಂತೆ ಹೊನ್ನಹಳ್ಳಿಯಲ್ಲಿ ಎಂಟು ದಿನ ಹೆಚ್ಚು ನಿಲ್ಲಲು ಒಪ್ಪಿದೆ. ಅದರೊಳಗೆ ಈ ಚಿತ್ರವನ್ನು ಬರೆದು ಮುಗಿಸಬೇಕಾಗಿದೆ." ಹನುಮಣ್ಣ ಕುಂಚದಿಂದ ಫಲಕದ ಮೇಲೆ ಗೆರೆಯೆಳೆಯುತ್ತಾ ಪಡಿನುಡಿದ, "ಎಂಟು ದಿನ ಇಲ್ಲಿ ನಿಲ್ಲಬೇಕಾಗಿ ಬಂದಾಗ ನನ್ನ ಮನಸ್ಸಿನಲ್ಲಿ ಒಂದು ಹೊಸ ಆಲೋಚನೆ ಹೊಳೆಯಿತು."

"ಅದು ಏನೆಂದು ತಾವು ನನಗೆ ಅರುಹಬಹುದೇ?"

"ಅಗತ್ಯವಾಗಿ ಅರುಹುವೆ. ನಿಮ್ಮಿಂದ ಮುಚ್ಚಿಡಬೇಕಾದುದು ನನ್ನ ಲ್ಲೇನೂ ಇಲ್ಲ. ನೀವು ನನಗೆ ತಂದೆಯಂತೆ ಇದ್ದೀರಿ. ವಂಚನೆ ಕೃತ್ರಿಮ ಗಳಿದ್ದರೆ ತಾನೇ ಮುಚ್ಚುಮರೆಗಳ ಅಗತ್ಯ" ಹನುಮಣ್ಣ ನಗುತ್ತಾ ಮಾತು ಮುಂದುವರಿಸಿದ: "ನಾನು ಚಿತ್ರಕಲೆಯನ್ನು ಸ್ವಲ್ಪ ಅಭ್ಯಾಸ ಮಾಡಿದ್ದೇನೆ. ಇಲ್ಲಿ ಅನಾವಶ್ಯಕ ಉಂಡುತಿಂದು ಹೊತ್ತು ಕಳೆಯುವುದರ ಬದಲು ಹೊನ್ನ ಹಳ್ಳಿಯ ರಾಣಿಯ ಚಿತ್ರ ಬರೆಯಬಾರದೇಕೆ ಎಂಬ ಆಲೋಚನೆ ಹುಟ್ಟಿತು. ಈಗ ಆ ಕಲ್ಪನೆಯನ್ನು ವಾಸ್ತವದ ರೂಪಕ್ಕೆ ತರುತಿದ್ದೇನೆ."

"ಬರೆದು ಮುಗಿಸಿದ ಮೇಲೆ ಈ ಚಿತ್ರವನ್ನೇನು ಮಾಡುವಿರಿ?"

"ಮಾಡುವುದೇನು?" ಹನುಮಣ್ಣ ಕುಂಚವನ್ನು ಬಣ್ಣದಲ್ಲಿ ಅದ್ದುತ್ತಾ ಮಾರ್ನುಡಿದ: "ತಂಗಿಗೆ ಅಣ್ಣನ ಉಡುಗೊರೆಯೆಂದು ನಿಮ್ಮ ರಾಣಿಗೆ ಕಾಣಿಕೆ ಕೊಡುವೆನು. ನಾನು ಸಾಂತಣ್ಣನ ಅತಿಥಿಯಾಗಿ ಇಲ್ಲಿ ಇದ್ದ ಸವಿನೆನಪಿಗೆ ಈ ಕಲಾಕೃತಿಯೊಂದಿರಲಿ!"

ಹನುಮಣ್ಣನ ಧ್ವನಿಯನ್ನು ದಂಡನಾಯಕ ಪರೀಕ್ಷಿಸಿದ. ಅದು ನೈಜ ವಾದುದಾಗಿದ್ದಿತು. ಅದರಲ್ಲಿ ಕೃತ್ರಿಮದ ಸೋಂಕು ಇರಲಿಲ್ಲ. ದೊರೆಯ ಮುಖಭಾವಗಳಲ್ಲಿ, ಕಣ್ಣುಗಳಲ್ಲಿ ಮತ್ತು ತುಟಿಗಳಲ್ಲಿ ಮಿನುಗುತ್ತಿರುವ

ಮುಗುಳ್ನಗೆಯಲ್ಲಿ ವಂಚನೆಯ ಛಾಯೆಯಿರಲಿಲ್ಲ. ಹನುಮಣ್ಣನ ಹೃದಯ ಪಾಪ ಸ್ಪರ್ಶವಿಲ್ಲದೆ ನಿರ್ಮಲವಾದುದೆಂಬುದು ದಂಡನಾಯಕನಿಗೆ ಖಚಿತ ವಾಯಿತು.

"ಪ್ರಭುಗಳು ರಾಣಿಯ ಕೋರಿಕೆಯನ್ನು ಮನ್ನಿಸದಿದ್ದರೆ ಲೇಸಾಗು ತ್ತಿದ್ದಿತು." ಎಂದು ವೀರಣ್ಣ ನುಡಿದ.

"ಅಷ್ಟೊಂದು ವಿಶ್ವಾಸದಿಂದ ಒತ್ತಾಯವಮಾಡಿದಾಗ ಹೇಗೆ ಆಗದೆಂದು ಹೇಳಲಿ? ಹನುಮಣ್ಣ ಕುಂಚವನ್ನು ನೆಲದಮೇಲಿರಿಸಿ, ವೀರಣ್ಣನ ಮೋರೆ ಯನ್ನು ನೋಡಿದ.

"ಅಂದಿನ ವಿಶ್ವಾಸ ಇಂದು ಅವಿಶ್ವಾಸಕ್ಕೆ ದಾರಿಮಾಡಿದೆ."

"ನಿಮ್ಮ ಮಾತು ಒಂದು ಒಗಟಾಗಿದೆಯಲ್ಲ ದಂಡನಾಯಕರೇ!"

"ಪ್ರಭೂ, ಬಾಳುವೆಯೇ ಒಂದು ಒಗಟಾಗಿದೆ. ನೀವು ಗುರುತರವಾದ ಅಪರಾಧಗಳನ್ನು ಮಾಡಿರುವಿರಿ!"

"ನಾನು ತಪ್ಪುಮಾಡಿದೆನೇ? ನೀವು ಬಳಸದೆ ಸ್ವಲ್ಪ ಬಿಚ್ಚಿ ವಿವರಿಸಿರಿ."

"ನಮ್ಮ ಪ್ರಭುಗಳು ವಿನಂತಿಸಿದಾಗ ನೀವು ಒಪ್ಪದೆ, ರಾಣಿ ಕೋರಿ ದಾಗ ಎಂಟುದಿನ ಹೆಚ್ಚು ನಿಲ್ಲಲು ಒಪ್ಪಿದುದು ನೀವು ಮಾಡಿದ ಮೊದಲನೆಯ ತಪ್ಪು." ವೀರಣ್ಣ ಅರಸನ ಅಪರಾಧಗಳನ್ನು ತಿಳಿಸತೊಡಗಿದ.

"ತಂಗಿಯಂತಿರುವ ರಾಣಿ, ಕಣ್ಣಲ್ಲಿ ನೀರು ತಂದುಕೊಂಡು ಬೇಡಿದಾಗ ನಾನು ಹೇಗೆ ಅಲ್ಲಗಳೆಯಲಿ?"

"ತಾವು ಸಂಗೀತಶಾಲೆಯಲ್ಲಿ ರಾಣಿಯ ಸಂಗೀತವನ್ನು ಕೇಳಿ ಆನಂದಿಸಿ ದುದು ಎರಡನೆಯ ಅಪರಾಧ. ರಾಣಿಯೊಡನೆ ಚದುರಂಗವಾಡಿದುದು ಮೂರನೆಯದು. ನೀವೂ ರಾಣಿಯೂ ಉದ್ಯಾನದಲ್ಲಿ ವಿಹರಿಸಿದುದು ನಾಲ್ಕನೆಯದು."

"ಇನ್ನೂ ಎಷ್ಟು ಆರೋಪಗಳನ್ನು ಹೊರಿಸುವಿರಿ?" ಹನುಮಣ್ಣ ನಡುವೆ ಬಾಯಿಹಾಕಿದ.

"ಇಲ್ಲ, ಇನ್ನೂ ಒಂದು ಉಳಿದಿದೆ." ವೀರಣ್ಣ ಹೇಳಿದ. "ನೀವು ರಾಣಿಯ ಚಿತ್ರ ಬರೆದುದು ಐದನೆಯದು."

"ಈ ಅಪರಾಧಗಳನ್ನು ನನ್ನ ಮೇಲೆ ಯಾರು ಹೊರಿಸಿದರು?"

"ಬೇರೆ ಯಾರು ಹೊರಿಸುತ್ತಾರೆ? ನಾಡನ್ನು ಆಳುವ ದೊರೆಗಳು

ಹೊರಿಸಿದ್ದಾರೆ. ನೀವು ರಾಣಿಯಲ್ಲಿ ಅನುರಾಗ ತಾಳಿರುವಿರೆಂದು ಬಗೆದು, ಗೆಳೆಯನಾಗಿ ಬಂದವನು ಹಗೆಯಾದನೆಂದು ಕೋಪ ತಾಳಿದ್ದಾರೆ."

"ಶಿವ ಶಿವಾ!" ಎಂದು ಹನುಮಣ್ಣ ಬೆರಳುಗಳಿಂದ ಕಿವಿಗಳನ್ನು ಮುಚ್ಚಿಕೊಂಡ. ಆಶ್ಚರ್ಯ ವ್ಯಥೆಗಳು ಅವನ ಮೊಗವನ್ನು ಕವಿದುವು. "ನಿಮ್ಮ ಮಾತುಗಳನ್ನು ನಾನು ನಂಬುವುದಿಲ್ಲ. ನಾನು ನನ್ನ ತಂಗಿಯನ್ನು ಕಾಮಿಸಿದೆನೆಂದು ಹೇಳುವ ನಾಲಗೆಗೆ ಹುಳು ಬಿದ್ದೀತು!"

"ಪ್ರಭೂ, ನನ್ನ ನುಡಿಯನ್ನು ನಂಬುವುದು ಬಿಡುವುದು ನಿಮ್ಮ ಇಷ್ಟ." ದಂಡನಾಯಕನು ಹೇಳಿದ: "ನಾನು ಸತ್ಯಸಂಗತಿಯನ್ನು ತಿಳಿಸಿದ್ದೇನೆ. ನಿಮ್ಮನ್ನು ಪಾಪ ಸೋಂಕದು ಎಂಬುದನ್ನು ನಾನೂ ಬಲ್ಲೆ. ಆದರೆ ಮತ್ಸರ ಚಿತ್ತದ ನಮ್ಮ ದೊರೆಗಳಲ್ಲಿ ಸಂಶಯದ ತುರುಚೆ ಬೇರೂರಿದೆ. ನಿಮ್ಮನ್ನು ವಿಷಪ್ರಯೋಗದಿಂದ ಕೊಲ್ಲಬೇಕೆಂದು ದೊರೆಗಳು ಆಣೆ ಗೈದಿರುವರು."

"ನನಗೆ ವಿಷಪ್ರಯೋಗವೇ? ಎಂತಹ ದ್ರೋಹ! ಸಾಂತಣ್ಣ ನನ್ನ ಗೆಳೆಯನೆಂದು ನಂಬಿ ಇಲ್ಲಿ ಬಂದು ಕೆಟ್ಟೆ. ದೇಗುಲವೆಂದು ಭಾವಿಸಿದುದು ಕಾಳೋರಗದ ಹುತ್ತವಾಯಿತು!" ಭಯ ಚಿಂತೆ ಕೋಪಗಳು ಏಕಕಾಲದಲ್ಲಿ ಹನುಮಣ್ಣನ ಅಂತರಂಗದಲ್ಲಿ ಕುಣಿದಾಡತೊಡಗಿದುವು.

"ಪ್ರಭುಗಳು ಧೈರ್ಯಗೆಡುವುದು ಬೇಡ. ನೀವು ತಾಳ್ಮೆ ವಹಿಸಬೇಕು." ವೀರಣ್ಣ ಸಲಹೆಯನ್ನು ಸೂಚಿಸತೊಡಗಿದ: "ಅರಸರು ನಿಮ್ಮನ್ನು ಕೊಲೆಗೈಯಬೇಕೆಂದು ಆಜ್ಞಾಪಿಸಿದರೂ ಆ ಕೆಲಸಮಾಡಿ ನನ್ನ ಕೈಗಳನ್ನೂ ಹೊನ್ನಹಳ್ಳಿಯ ಹೆಸರನ್ನೂ ಕಲಂಕಪಡಿಸಲಾರೆನು."

"ಮತ್ತೇನು ಮಾಡಬೇಕೆಂದು ನೀವು ಸೂಚಿಸುವಿರಿ?"

"ನೀವು ಇಂದಿನ ಇರುಳೇ ನಾವೆಯನ್ನು ಅಣಿಗೊಳಿಸಿ ಗಂಗವಳ್ಳಿಗೆ ಪ್ರಯಾಣವನ್ನು ಕೈಗೊಳ್ಳಬೇಕು."

"ನೀವೇನು ಮಾಡುವಿರಿ?"

"ನಾನು ನನ್ನ ದೊರೆಯ ಕೋಪಾಗ್ನಿಗೆ ಈ ಮೈಯನ್ನು ಬಲಿಗೊಡುವೆನು." ವೀರಣ್ಣ ದೃಢತೆ ಬೆರೆತ ಸ್ವರದಲ್ಲಿ ಹೇಳಿದ.

"ನನಗೆ ಪ್ರಾಣದಾನ ಮಾಡಿದವರು ನೀವು. ದಂಡನಾಯಕರೇ,—ನಿಮ್ಮ ಜೀವ ಬಹು ಬೆಲೆಯುಳ್ಳದ್ದು." ಗಂಗವಳ್ಳಿಯ ಅರಸು ಹೇಳಿದ: "ಈಗ ನೀವು ನನ್ನೊಡನೆ ಗಂಗವಳ್ಳಿಗೆ ಬಂದುಬಿಡಿ. ನನ್ನ ಓಲಗದಲ್ಲಿ

ಮಂತ್ರಿಗಳಾಗಿ ಇರಿ. ಮುಂದೆ ಸಾಂತಣ್ಣನ ಕಣ್ಣುಗಳಲ್ಲಿ ಕವಿದ ಮಂಜು ಹರಿಯುಬಹುದು; ಅವನಲ್ಲಿ ವಿವೇಕ ಕೊನರಬಹುದು. ಆಗ ನೀವು ಹೊನ್ನಹಳ್ಳಿಗೆ ಮರಳಿಬಂದು ಸಿಂಹಾಸನಕ್ಕೆ ಸೇವೆ ಸಲ್ಲಿಸುವಿರಂತೆ."

ಹನುಮಣ್ಣನ ಸೂಚನೆ ದಂಡನಾಯಕನಿಗೆ ಪಥ್ಯವಾಗಿ ಕಂಡಿತು. ಗಂಗವಳ್ಳಿಯ ದೊರೆ ಹೊರಟುಹೋದ ಮೇಲೆ,—ತಾನೊಬ್ಬನೇ ಹೊನ್ನಹಳ್ಳಿಯಲ್ಲಿ ಉಳಿದರೆ ಸ್ವಾಮಿದ್ರೋಹ ಬಗೆದನೆಂದು ಅರಸನು ತನ್ನನ್ನು ಶೂಲಕ್ಕೆ ಏರಿಸುವನು. ತಾನು ರಾಜದ್ರೋಹಿಯೆಂಬ ಅಪಕೀರ್ತಿ ಚಿರವಾಗಿ ಉಳಿಯುವುದು. ಈಗ ದೊರೆಯ ಕೋಪದಿಂದ ಪಾರಾಗಿ ಉಳಿದರೆ, ಮುಂದೆ ತಾನು ಅರಸನಿಗೆ ಕೇಡನ್ನು ಬಗೆಯಲಿಲ್ಲ; ಹಿತವನ್ನೇ ಬಗೆದನೆಂದು ಶ್ರುತಪಡಿಸಬಹುದು." ಎಂದು ವೀರಣ್ಣ ಆಲೋಚಿಸಿದ. ಗಂಗವಳ್ಳಿಯ ಅರಸನೊಡನೆ ತೆರಳುವುದು ಅವನಿಗೆ ಸಮಂಜಸವಾಗಿ ಕಂಡಿತು.

ರೇವಿನಲ್ಲಿ ಹನುಮಣ್ಣನ ನಾವೆ ಇತ್ತು. ಅವನು ಅಂಬಿಗರನ್ನು ಕರೆದು ರಾತ್ರಿ ಪ್ರಯಾಣವನ್ನು ಗೈಯಲು ಸಿದ್ಧರಾಗಬೇಕು ಎಂದು ಆಜ್ಞಾಪಿಸಿದ. ಅವರು ಅಂಗಡಿಗಳಿಂದ ಪ್ರಯಾಣಕ್ಕೆ ಅಗತ್ಯವಾದ ಸರಕುಗಳನ್ನು ಕೊಂಡುಕೊಂಡರು; ನಾವೆಯನ್ನು ಸರಿಪಡಿಸಿದರು; ಹಾಯಿಗಳನ್ನು ಎತ್ತಿಕಟ್ಟಿದರು. ದೊರೆ ಸೂಚಿಸಿದೊಡನೆಯೇ ಪಯಣವನ್ನು ಕೈಗೊಳ್ಳಲು ಅಣಿಯಾಗಿ ಅವನ ಅಪ್ಪಣೆಯನ್ನು ನಿರೀಕ್ಷಿಸುತ್ತಾ ನಿಂತರು.

ಇರುಳು ಆಗಮಿಸಿತು. ಚಂದ್ರ ಮೂಡಲಲ್ಲಿ ಉದಿಸಿ ಹಾಲು ಬೆಳಕನ್ನು ಚೆಲ್ಲಿದ. ತಾರೆಗಳು ಬಾಂದಳದಲ್ಲಿ ಮಿನುಗಿದುವು. ಹೊನ್ನಹಳ್ಳಿಯ ಜನವೆಲ್ಲ ತಂತಮ್ಮ ಮನೆಗಳಲ್ಲಿ ಸವಿನಿದ್ದೆಯ ತೆಕ್ಕೆಗೆ ಒಳಗಾಗಿದ್ದರು. ಹನುಮಣ್ಣ ಯಾರಿಗೂ ಅರಿಯದಂತೆ ಅರಮನೆಯ ಅತಿಥಿ ಗೃಹದಿಂದ ಹೊರಬಿದ್ದ. ವೀರಣ್ಣ ಅವನನ್ನು ಹಿಂಬಾಲಿಸಿದ. ಹನುಮಣ್ಣನ ಎದೆ ದುಃಖದಿಂದ ಬಹಳ ಭಾರವಾಗಿತ್ತು. ಆತ್ಮಮಿತ್ರನಾದ ಸಾಂತಣ್ಣ ತನ್ನಲ್ಲಿ ಸಂಶಯ ತಾಳಿದನಲ್ಲ ಎಂಬ ಕಿಚ್ಚು ಅವನ ಅಂತರಂಗದಲ್ಲಿ ಕುದಿಯುತ್ತಿದ್ದಿತು.

ವೀರಣ್ಣನ ಮನಸ್ಸಾದರೂ ಭಾರವಾಗಿದ್ದಿತು. ತಾನು ಹುಟ್ಟಿ ಬೆಳೆದ ನಾಡನ್ನು ಕಾಪಿಡಲೆಂದು ಅವನು ಅನೇಕ ರಣರಂಗಗಳಲ್ಲಿ ಕಾದಾಡಿ ಮೈಯ ನೆತ್ತರನ್ನು ಹೊರಸೂಸಿದ್ದ. ಹೊನ್ನಹಳ್ಳಿಯ ಸಿಂಹಾಸನದ ಸೇವೆಯಲ್ಲಿ ಅವನ ಕೂದಲು ನರೆತು ಹಣ್ಣಾಗಿತ್ತು. ಈಗ ಹುಟ್ಟು ನಾಡನ್ನು ತೊರೆದು

ಅನ್ಯನಾಡಿಗೆ ತೆರಳಲು ಅವನ ಮನಸ್ಸು ಮಮ್ಮಲ ಮರುಗಿತು.

ಕಡಲದಂಡೆಯಲ್ಲಿ ಅಂಬಿಗರು ತಮ್ಮ ದೊರೆಯ ಬರವನ್ನು ಎದುರು ನೋಡುತಿದ್ದರು. ಹನುಮಣ್ಣ ಬಂದೊಡನೆಯೇ ಅವರು ನಾವೆಯ ಹಾಯಿ ಪಟಗಳನ್ನು ಇಳಿಸಿದರು. ದೊರೆ ಹಡಗವನ್ನೇರಿದ. ಅವನ ಭಾರವಾದ ಹೃದಯದಿಂದ ಹೊರಟ, "ಗೆಳೆಯನಾಗಿ ಬಂದವನು ಹಗೆಯಾಗಿ ಮರಳು ವಂತಾಯಿತು." ಎಂಬ ದುಃಖೋದ್ಗಾರ ಹೊಮ್ಮಿ ಗಾಳಿಯಲ್ಲಿ ಬೆರೆತಿತು.

"ತಾಯಿ ಭೂದೇವಿ, ನಿನ್ನನ್ನು ತೊರೆದುಹೋಗಲು ಅಪ್ಪಣೆಗೊಡು. ನಿನ್ನ ಮಡಿಲಲ್ಲಿ ಚಿರನಿದ್ರೆಯನ್ನೈದುವ ಭಾಗ್ಯ ನನಗಿರುವುದೋ ಇಲ್ಲವೋ?" ಎಂದು ವೀರಣ್ಣ ಬಿಕ್ಕುನುಡಿಯಲ್ಲಿ ಹೇಳಿದ. ಅವನು ಕಡಲದಂಡೆಯಿಂದ ಒಂದು ಹಿಡಿ ಮರಳನ್ನು ಎತ್ತಿ ತನ್ನ ಮಸ್ತಕದ ಮೇಲೆ ಹೊತ್ತುಕೊಂಡ.

ಎಲ್ಲರೂ ನಾವೆಯನ್ನು ಏರಿದರು. ಅಂಬಿಗರು ಚುಕ್ಕಾಣಿಗಳನ್ನು ತಿರು ಗಿಸತೊಡಗಿದರು. ಜಲ್ಲೆಗಳನ್ನು ಒತ್ತತೊಡಗಿದರು. ನೌಕೆ ಕಡಲಿನ ಎದೆಯ ಮೇಲೆ ತೇಲತೊಡಗಿತು. ಕಡಲಿನ ಅಲೆಗಳು ನಾವೆಯನ್ನು ಕುಣಿಸಿದುವು. ನೌಕೆ ಮುಂದೆ ಚಲಿಸತೊಡಗಿತು. ಬಾಂದಳದಲ್ಲಿ ನಿಂತಿದ್ದ ಚಂದ್ರ ಮಾನವ ಹೃದಯದಲ್ಲಿ ಸಂಶಯ ಮತ್ಸರಗಳನ್ನು ಕಂಡು ತಿರಸ್ಕಾರದಿಂದ ನಗೆಯನ್ನು ಹೊರಚೆಲ್ಲಿದ.

---

## ಆರು

ಹನುಮಣ್ಣ ವೀರಣ್ಣರು ತಾವು ನೌಕೆಯನ್ನೇರಿ ಹೊನ್ನಹಳ್ಳಿಯನ್ನು ತೊರೆಯುವುದನ್ನು ಯಾರೂ ಅರಿಯರೆಂದು ಭಾವಿಸಿದ್ದರು. ಆದರೆ ಸಾಂತ ಣ್ಣನ ಆಸ್ಥಾನದ ಇನ್ನೊಬ್ಬ ಸರದಾರ ನೀಲಣ್ಣ ಗಂಗವಳ್ಳಿಯ ಅರಸು ವೀರಣ್ಣ ನೊಡನೆ ನೌಕೆಯನ್ನೇರುವುದನ್ನು ನೋಡಿದ್ದ. ಹತ್ತೆಂಟು ದಿನ ಅರಮನೆಯ ಲ್ಲಿಯೇ ಇದ್ದು ಬೇಸರಗೊಂಡಿದ್ದ ಹನುಮಣ್ಣ ಬೇಸರ ಪರಿಹಾರಕ್ಕೆಂದು ದಂಡ ನಾಯಕನೊಡನೆ ಬೆಳದಿಂಗಳ ಇರುಳಲ್ಲಿ ಸಮುದ್ರ ವಿಹಾರವನ್ನು ಕೈಗೊಂಡಿರ ಬಹುದೆಂದು ನೀಲಣ್ಣ ಊಹಿಸಿದ. ಅವನು ಈ ಸಂಗತಿಯನ್ನು ಹೆಚ್ಚು ಆಲೋಚನೆ ಮಾಡದೆ ತನ್ನ ನಿಲಯವನ್ನು ಸೇರಿದ.

ಮರುದಿನ ಬೆಳಗಾಯಿತು. ನಿತ್ಯಪದ್ಧತಿಯಂತೆ ನೀಲಣ್ಣ ರಾಜಮಂದಿ ರಕ್ಕೆ ದೊರೆಗಳ ದೈನಂದಿನ ಆಜ್ಞೆಗಳನ್ನು ಪಡೆಯಲು ತೆರಳಿದ. ಪ್ರಭು ಚಿಂತಾ

ಮಗ್ನನಾಗಿ ಮಂತಣದ ಕೋಣೆಯಲ್ಲಿ, ಬೆನ್ನ ಹಿಂದೆ ಕೈಗಳೆರಡನ್ನೂ ಕಟ್ಟಿ ಅತ್ತಲಿಂದಿತ್ತ ಅಲೆಯುತ್ತಿರುವುದು ನೀಲಣ್ಣನ ದೃಷ್ಟಿಗೆ ಬಿದ್ದಿತು. ದೊರೆಯ ಮೋರೆ ಮಳೆಗಾಲದ ಮುಗಿಲಂತೆ ಕಪ್ಪಾಗಿದ್ದಿತು. ಕಣ್ಣುಗಳು ಕಿಡಿಗಳನ್ನು ಸುರಿಸುತ್ತಿದ್ದುವು. ಹುಬ್ಬುಗಳು ಗಂಟಿಕ್ಕಿದ್ದುವು. ಅವನು ನೀಲಣ್ಣನನ್ನು ಕಂಡೊಡನೆ, "ನೀಲಣ್ಣ ನೀನು ಗಂಗವಳ್ಳಿಯ ಅರಸನನ್ನೂ ವೀರಣ್ಣನನ್ನೂ ನೋಡಿದೆಯಾ? ಅವರೆಲ್ಲಿದ್ದಾರೆ?" ಎಂದು ಆತುರದಿಂದ ಪ್ರಶ್ನಿಸಿದ.

ಅರಸನ ನುಡಿಯಲ್ಲಿ ಕ್ರೋಧ ಬೆರೆತಿತ್ತು. ಅವನ ದನಿ ಕರ್ಕಶ ವಾಗಿತ್ತು. ನೀಲಣ್ಣನ ಎದೆಯಲ್ಲಿ ಅಂಜಿಕೆಯ ಅಲೆಯೊಂದು ಚಲಿಸಿತು. ಅವನು ಮರುನುಡಿಯದೆ ಒಂದು ಕ್ಷಣ ಮೌನವನ್ನು ಕೈಗೊಂಡ.

"ಅವರೆಲ್ಲಿದ್ದಾರೆಂಬುದನ್ನು ನೀನು ಬಲ್ಲೆ!" ದೊರೆ ಗರ್ಜಿಸಿದ: "ಬೇಗ ಬೇಗ ಹೇಳು. ಇಲ್ಲದಿದ್ದರೆ ನಿನ್ನ ರುಂಡ ಕೊರಳ ಮೇಲೆ ಉಳಿಯಲಾರದು!"

"ಒಡೆಯರೇ, ಸುಳ್ಳಾಡೆನು. ನಿನ್ನೆ ಇರುಳು ಗಂಗವಳ್ಳಿಯ ಪ್ರಭುಗಳು ದಂಡನಾಯಕರೊಡನೆ ನೌಕೆಯೇರುವುದನ್ನು ನೋಡಿದೆ."

"ಗೂಡಿನಿಂದ ತೋಳ ತಪ್ಪಿಸಿಕೊಂಡು ಹೋಯಿತು" ಸಾಂತಣ್ಣ ಒದರಿದ:

"ದ್ರೋಹಿ! ನೀನೇಕೆ ಒಡನೆ ಬಂದು ನನಗೆ ಈ ಸಂಗತಿಯನ್ನು ಅರುಹಲಿಲ್ಲ?"

"ದಂಡನಾಯಕರು ಜತೆಯಲ್ಲಿರುವುದನ್ನು ಕಂಡು ಗಂಗವಳ್ಳಿಯ ಅರಸರು ಬೆಳದಿಂಗಳಲ್ಲಿ ಸಮುದ್ರವಿಹಾರಕ್ಕೆ ಹೊರಟಿರುವರೆಂದು ನಾನು ಆಲೋಚಿಸಿದೆ."

"ನಿನ್ನ ಮಂಕು ಬುದ್ಧಿಗೆ ನಾನು ಏನು ಹೇಳಲಿ? ಸರ್ವ ನಾಶವಾಗಿ ಹೋಯಿತು! ನಮ್ಮ ಸಿಂಹಾಸನದ ಗೌರವವನ್ನು ಸೂರೆಗೊಳ್ಳಲು ಹವಣಿಸಿದ ನೀಚ ಪಾರಾಗಿ ಹೋದ. ಅವನಿಗೆ ನನ್ನ ದಂಡನಾಯಕನೇ ಬೆಂಬಲಿಗನಾದ!"

ಎಂದು ಸಾಂತಣ್ಣ ಕೋಪದಿಂದ ಬಡಬಡಿಸಿದ. ಹನುಮಣ್ಣ ಹೊನ್ನಹಳ್ಳಿಯಿಂದ ತಪ್ಪಿಸಿಕೊಂಡು ಹೋದುದು ಅವನನ್ನು ಕೋಪಾಕುಲನನ್ನಾಗಿ ಮಾಡಿತು. ಅವನ ಮನಸ್ಸು ಕ್ರೋಧ ದ್ವೇಷಗಳ ಕೇಳೀರಂಗವಾಯಿತು. ಅವನ ಬುದ್ಧಿ ವಿವೇಕದ ಹಿಡಿತದಿಂದ ಸಂಪೂರ್ಣವಾಗಿ ತಪ್ಪಿಸಿಕೊಂಡಿತು. ತನಗೆ ಆಪ್ತನಾದ ವೀರಣ್ಣನೇ ಗಂಗವಳ್ಳಿಯ ದೊರೆಗೆ ಬೆಂಬಲಿಗನಾದನೆಂದು

ತಿಳಿದಾಗ ಅವನ ಮನಸ್ಸಿನ ಕಿಚ್ಚು ಇನ್ನಷ್ಟು ಉಜ್ವಲವಾಗಿ ಉರಿಯತೊಡಗಿತು. ಅವನಿಗೆ ತನ್ನ ಬಂಟರಲ್ಲಿದ್ದ ವಿಶ್ವಾಸವೆಲ್ಲ ಹಾರಿಹೋಯಿತು. "ಆಸ್ಥಾನದ ಸಭಿಕರೆಲ್ಲ ಹನುಮಣ್ಣನ ಬಳಿ ಸಂಚಿನಲ್ಲಿ ಪಾಲುಗಾರರಾಗಿದ್ದಾರೆ" ಎಂದು ಅವನ ಸಂಶಯಚಿತ್ತ ನುಡಿಯತೊಡಗಿತು. ಹನುಮಣ್ಣ ವೀರಣ್ಣರು ನೌಕೆಯನ್ನು ಏರಿ ಗಂಗವಳ್ಳಿಯ ಮಾರ್ಗ ಹಿಡಿದಿದ್ದರು; ಸಾಂತಣ್ಣನ ಹಿಡಿತದಿಂದ ಪಾರಾಗಿದ್ದರು. ಈಗ ಅವನ ಕೋಪವೆಲ್ಲ ರಾಣಿ ರೇವಕ್ಕನ ಕಡೆಗೆ ಹೊರಳಿತು.

ಅರಸು ನೀಲಣ್ಣ, ದುಗ್ಗಪ್ಪ, ಸಂಕಣ್ಣ ಮೊದಲಾದ ಅಧಿಕಾರಿಗಳನ್ನು ಕರೆದುಕೊಂಡು ಅಂತಃಪುರಕ್ಕೆ ಹೋದ. ಆಗ ರಾಣಿ ರೇವಕ್ಕ ರತ್ನಗಂಬಳಿಯ ಮೇಲೆ ಕುಳಿತು ಬಾಲಕ ಮಾದಣ್ಣ ಹೇಳುವ ಕತೆಯನ್ನು ಕೇಳುವುದರಲ್ಲಿ ಆಸಕ್ತಳಾಗಿದ್ದಳು. ದಾಸಿಯರಿಬ್ಬರು ಪಕ್ಕದಲ್ಲಿ ನಿಂತು ಚಾಮರ ಬೀಸುತಿದ್ದರು. ದೊರೆ ಒಬ್ಬನೇ ರಾಣೀವಾಸಕ್ಕೆ ಬರುತಿದ್ದನಲ್ಲದೆ, ಆಸ್ಥಾನದ ಅಧಿಕಾರಿಗಳನ್ನು ಕರೆದುಕೊಂಡು ಬರುತ್ತಿರಲಿಲ್ಲ. ಅವನು ಅನಿರೀಕ್ಷಿತವಾಗಿ ಅಧಿಕಾರಿಗಳ ಸಂಗಡ ಬಂದುದನ್ನು ಕಂಡು ರಾಣಿಗೆ ಸೋಜಿಗವಾಯಿತು. ಮಾದಣ್ಣ ಆ ವೇಳೆಯಲ್ಲಿ ತಂದೆ ಅಧಿಕಾರಿಗಳೊಡನೆ ಬಂದುದನ್ನು ನೋಡಿ, ವಿಸ್ಮಯ ತಾಳಿ ತಂದೆಯ ಮೊಗವನ್ನೇ ದಿಟ್ಟಿಸಿನೋಡತೊಡಗಿದ. ತಂದೆಯ ಕ್ರೂರ ಮುಖಮುದ್ರೆಯನ್ನು ಕಂಡು ಮಗನಿಗೆ ಭಯವಾಯಿತು. ಅವನ ಮೊಗ ಕಾದ ಉಕ್ಕಿನಂತಿತ್ತು. ಕಣ್ಣುಗಳು ಉರಿಯುವ ಅಗ್ನಿಗೋಳಗಳಾಗಿದ್ದುವು. ತಂದೆಯ ಭೀಕರಾಕೃತಿಯನ್ನು ಕಂಡು ಮಾದಣ್ಣ ತಾನು ಮಾಡಿದ ಯಾವುದೋ ಒಂದು ತಪ್ಪಿಗೆ ಅಪ್ಪನು ತನ್ನನ್ನು ದಂಡಿಸಲು ಬಂದಿರುವನೆಂದು ಊಹಿಸಿದ. ಅವನು ತಾಯಿಯನ್ನು ತಬ್ಬಿಕೊಂಡು, "ಅಪ್ಪ ನನ್ನ ಹೊಡೆಯುತ್ತಾನೆ" ಎಂದು ನಡುಗಿದ ದನಿಯಲ್ಲಿ ಹೇಳಿದ.

ರಾಣಿ ಪತಿಯ ಮೊಗವನ್ನು ನೋಡಿದಳು. ಅವನ ಮೊಗದಲ್ಲಿ ನೆಲಸಿದ್ದ ಭೀಕರತೆ ಅವಳ ಎದೆಯನ್ನು ತಲ್ಲಣಗೊಳಿಸಿತು. ಪತಿ ಕ್ರೋಧಭೈರವನಾದುದು ಏಕೆಂಬುದು ಅವಳಿಗೆ ತಿಳಿಯದಾಯಿತು. ಅವಳಾದರೂ, ಮಗು ಮಾಡಿದ ಯಾವುದೋ ಒಂದು ತಪ್ಪಿಗೆ ಗಂಡನು ಕೋಪವನ್ನು ತಾಳಿರಬಹುದು ಎಂದು ಬಗೆದಳು. ಆಕೆ "ಮಗುವಿನ ಮೇಲೆ ಇಷ್ಟೊಂದು ಸಿಟ್ಟೇಕೆ?" ಎಂದು ಮೆದುವಾಗಿ ಪತಿಯನ್ನು ಪ್ರಶ್ನಿಸಿದಳು.

"ರಾಣಿ, ಮಗುವಿನ ಮೇಲಲ್ಲ ನಾನು ಮುನಿದಿರುವುದು" ಸಾಂತಣ್ಣ ಕರ್ಕಶ ಸ್ವರದಲ್ಲಿ ಒದರಿದ: "ನನ್ನ ಕೋಪವೆಲ್ಲ ಇರುವುದು ನಿನ್ನ ಮೇಲೆ!"

"ನನ್ನ ಮೇಲೆಯೇ? ನನ್ನ ಯಾವ ಕೆಲಸ ಹೊರಗೆ ತಪ್ಪಾಗಿ ಕಂಡಿತು?" ಅರಸನ ಮನಸ್ಸನ್ನು ತಿಳಿಯದ ರಾಣಿ ನಗೆಬೆರೆತ ಸ್ವರದಲ್ಲಿ ಪ್ರಶ್ನಿಸಿದಳು.

"ಹೊನ್ನವಳ್ಳಿಯ ಅರಸು ಕುಲಕ್ಕೆ ಮಸಿಬಳಿದುದಲ್ಲದೆ, ಯಾವ ಕೆಲಸ ತಪ್ಪಾಯಿತು ಎಂದು ಕೇಳುವ ಧೈರ್ಯ ಬೇರೆ! ರಾಣಿ, ನಿನ್ನ ನಾಟಕವೆಲ್ಲ ಹಾಗಿರಲಿ. ಬೆಕ್ಕು ಯಾರೂ ಕಾಣುವುದಿಲ್ಲ ಎಂದು ಭಾವಿಸಿ ಕಣ್ಣು ಮುಚ್ಚಿ ಹಾಲು ಕುಡಿಯುವುದು."

"ನಾನು ಯಾವ ನಾಟಕವನ್ನೂ ಹೂಡಿಲ್ಲ." ಎಂದು ರಾಣಿ ನಡುಗುತ್ತಾ ಮಾರ್ನುಡಿದಳು.

"ಈಗ ಆ ಮಾತು ಹಾಗಿರಲಿ. ಈ ಮಗುವನ್ನು ಮೊದಲು ದೂರ ಒಯ್ಯಿರಿ" ಸಾಂತಣ್ಣ ಮಗನ ಕಡೆ ಬೆರಳುತೋರಿಸುತ್ತಾ ಪಹರೆಯ ಭಟರಿಗೆ ಆಜ್ಞಾಪಿಸಿದ.

ಭಟರು ರಾಜಸನ್ನಿಧಿಯಿಂದ ಮಾದಣ್ಣನನ್ನು ಎತ್ತಿಕೊಂಡು ಹೋಗಲು ಅಡಿಗಳನ್ನು ಮುಂದಿರಿಸಿದರು. ದೊರೆಮಗ ತಾಯಿಯನ್ನು ತಬ್ಬಿಕೊಂಡು "ಇಲ್ಲ ಅವ್ವಾ, ನಾನು ಹೋಗುವುದಿಲ್ಲ. ಅವರು ನನ್ನನ್ನು ಕತ್ತಲೆಯ ಕೋಣೆಯೊಳಗೆ ಸೇರಿಸುತ್ತಾರೆ" ಎಂದು ರೋದಿಸತೊಡಗಿದ.

ರಾಜಭಟರು ಏನುಮಾಡಬೇಕೆಂಬುದನ್ನು ತಿಳಿಯದೆ ಸುಮ್ಮನೆ ನಿಂತರು. ಅವರು ತನ್ನ ಆಜ್ಞೆಯನ್ನು ಪಾಲಿಸದುದನ್ನು ಕಂಡು ದೊರೆಯ ಮುನಿಸು ಹೆಚ್ಚಿತು. ಅವನು "ಕತ್ತೆಗಳೇ, ಏನು ನೋಡುತ್ತಿರುವಿರಿ? ಆ ಪೋರನನ್ನು ಎಳೆದುಕೊಂಡು ಹೋಗಿರಿ!" ಎಂದು ಇನ್ನೊಮ್ಮೆ ಆಜ್ಞಾಪಿಸಿದ.

ಭಟರು ಬಂದು ರಾಜಕುಮಾರನ ಕೈಗಳನ್ನು ಹಿಡಿದುಕೊಂಡರು. ಮಾದಣ್ಣ "ಇಲ್ಲಪ್ಪಾ ನಾನು ಅವ್ವನ ಜತೆಯಲ್ಲಿಯೇ ಇರುವೆನು" ಎಂದು ಅಳಲಿದ.

"ಮಾದಣ್ಣ, ಅವರೇನೂ ಮಾಡುವುದಿಲ್ಲ. ನೀನೀಗ ಅವರೊಡನೆ ಹೋಗು. ಆ ಕುಲಟೆ ಇಂದಿನಿಂದ ನಿನ್ನ ಅವ್ವನಲ್ಲ; ನೀನು ಅವಳ ಮಗ ನಲ್ಲ!" ಎಂಬ ಕರ್ಕಶವಾಣಿ ಅರಸನ ತುಟಿಗಳಿಂದ ಹೊರಚೆಲ್ಲಿತು.

ರಾಜಭಟರು ಮಾದಣ್ಣನನ್ನು ರಾಣಿಯ ಹತ್ತಿರದಿಂದ ಎಳೆದರು. ಅವರು ಅವನನ್ನು ಎತ್ತಿಕೊಂಡು ಕೋಣೆಯಿಂದ ಹೊರತೆರಳಿದರು.

ರಾಜನು ಹೇಳಿದ 'ಕುಲಟೆ' ಎಂಬ ವಚನ ಅಂಬಿನಂತೆ ರೇವಕ್ಕನ ಹೃದಯಕ್ಕೆ ನಾಟಿತು. ಅವಳು ಈ ಆಘಾತವನ್ನು ತಾಳಿಕೊಳ್ಳಲಾರದೆ ನೆಲದ ಮೇಲೆ ಕುಸಿದಳು, ಅವಳ ಕಣ್ಣುಗಳಿಂದ ಧಾರಾಕಾರವಾಗಿ ಅಶ್ರು ಪ್ರವಾಹ ಹರಿಯಿತು. ಅವಳ ಎದೆಯಿಂದ "ನನ್ನನ್ನು ಕುಲಟೆಯೆಂದು ಹೇಳುವ ನೀಚನ ನಾಲಗೆ ಹುಳಿತೀತು!" ಎಂಬ ನೊಂದನುಡಿ ಹೊರಬಂತು.

"ರಾಣಿ, ನೀನು ನಾಟಕ ಕಲೆಯಲ್ಲಿ ಚೆನ್ನಾಗಿ ಪಳಗಿರುವೆ!" ಸಾಂತಣ್ಣ ಚುಚ್ಚು ಮಾತನ್ನಾಡಿದ: "ಈ ಅಭಿನಯುವನ್ನು ಹನುಮಣ್ಣನ ಮುಂದೆ ತೋರಿಸಿದ್ದರೆ ಲೇಸಾಗುತಿತ್ತು. ಅವನು ಅದನ್ನು ಮೆಚ್ಚುತಿದ್ದ. ಆದರೆ ಸಾಂತಣ್ಣ ಹನುಮಣ್ಣನಾಗಲಾರ. ನೀನು ಹನುಮಣ್ಣನ ರಂಗಿನ ನುಡಿಗಳಿಗೆ ಮನಸೋತು ನಿನ್ನ ಆತ್ಮವನ್ನು ಅವನಿಗೆ ಮಾರಿಕೊಂಡೆ. ನಿನ್ನ ಪತಿಗೆ ದ್ರೋಹವನ್ನು ಬಗೆದು ಅವನ ಬಾಳುವೆಯಲ್ಲಿ ಹಾಲಾಹಲ ಬೆರಸಿದೆ. ಹೊನ್ನ ಹಳ್ಳಿಯ ರಾಜಕುಲಕ್ಕೆ ಅಪಕೀರ್ತಿಯನ್ನು ತಂದೊಡ್ಡಿದೆ."

"ಇಲ್ಲ! ಪ್ರಭೂ, ನೀವು ತಪ್ಪು ತಿಳಿದುಕೊಂಡಿರುವಿರಿ." ಬಿಕ್ಕುಗೊರಲಿ ನಲ್ಲಿ ರೇವಕ್ಕ ಮಾರ್ನುಡಿದಳು. "ನನ್ನ ಶರೀರ ಆತ್ಮಗಳೆರಡೂ ಪವಿತ್ರವಾ ಗಿವೆ. ಈಗ ನೀವು ದುಡುಕಿದರೆ ಮುಂದೆ ಪರಿತಪಿಸುವಿರಿ. ನನ್ನ ನಡೆನುಡಿ ಗಳ ಶುದ್ಧತೆಯ ಜ್ಞಾನ ನಿಮಗಾದಾಗ ನೀವು ಮರುಗುವಿರಿ. ನನ್ನನ್ನು ಅಪ ರಾಧದ ಶೂಲಕ್ಕೇರಿಸುವ ಮುನ್ನ ತುಸು ಸಾವಕಾಶವಾಗಿ ಆಲೋಚನೆ ಮಾಡಿರಿ."

"ನಿನ್ನ ಬೊಗಳಿಕೆಯನ್ನು ಸಾಕುಮಾಡು! ಅಂಗೈ ಹುಣ್ಣಿಗೆ ಕನ್ನಡಿ ಯೇಕೆ? ಭಟರೇ, ಈಕೆಯನ್ನು ಸೆರೆಮನೆಗೆ ಸೆಳೆದುಕೊಂಡು ಹೋಗಿರಿ!"

"ಪ್ರಭೂ, ನಾನು ಕನಸು ನೆನಸುಗಳಲ್ಲಿ ನಿಮಗೆರಡು ಬಗೆಯಲಿಲ್ಲ. ಈ ವರೆಗೆ ಸದಾಚಾರದ ರಾಜಮಾರ್ಗವನ್ನು ಬಿಟ್ಟು ಆಚೆ ಅಡಿಯಿರಿಸಲಿಲ್ಲ. ಈ ತನಕ ನಿಮ್ಮನ್ನು ನನ್ನ ಸ್ವಾಮಿ, ನನ್ನ ದೇವರು ಎಂದು ನಾನು ಪೂಜಿಸಿದೆ. ದೇವರೇ ಭಕ್ತಳ ಮೇಲೆ ಮುನಿವುದಾದರೆ, ಮನೆಯೇ ಸಿಡಿದೆದ್ದು ನನ್ನನ್ನು ನುಂಗುವುದಾದರೆ, ಅದು ನನ್ನ ಗ್ರಹಚಾರವೆಂದೇ ಹೇಳಬೇಕು. ಹೊನ್ನ ಹಳ್ಳಿಯ ರಾಜಕುಲವನ್ನು ಶನಿ ಬಂಧಿಸಿದೆ."

"ರಾಣಿ ನೀನು ಅಂದುದು ನಿಜ." ಸಾಂತಣ್ಣ ಮಾತಿನ ಮುಳ್ಳಿನಿಂದ ಸತಿಯ ಹೃದಯವನ್ನು ಇರಿಯ ತೊಡಗಿದ. "ಹೊನ್ನ ಹಳ್ಳಿಯನ್ನು ಬಾಧಿಸಿದ ಶನಿ ಹನುಮಣ್ಣ. ಅವನು ನಿನ್ನನ್ನು ಕೆಡಿಸಿ ಹೊರಟು ಹೋದ!"

"ನನ್ನ ಬಾಳುವೆಯ ಬೆಳಕೇ, ಬಿರುನುಡಿಯ ಕಿಚ್ಚಿನಿಂದ ನನ್ನ ಹೃದಯ ಮಂದಾರವನ್ನೇಕೆ ಸುಡುವಿರಿ?" ಶೋಕದಿಂದ ರಾಣಿ ಮಾರ್ನುಡಿದಳು: "ನೀವು ಯಾವ ಸಂಕಟದ ಬೆಂಕಿಗೆ ನನ್ನನ್ನು ದೂಡಿದರೂ ನಾನು ಇತರ ಹೆಣ್ಣುಗಳಂತೆ ಕಣ್ಣೀರ ಕೋಡಿಯನ್ನು ಹರಿಸಲಾರೆನು. ನನ್ನ ಕಣ್ಣೀರು ನಿಮ್ಮ ಎದೆಯ ಬೆಂಕಿಯನ್ನು ಆರಿಸದೆಂಬುದನ್ನು ನಾನು ಬಲ್ಲೆ. ಆ ಬೆಂಕಿಯಲ್ಲಿ ನನ್ನ ಹೃದಯ ಬೆಂದು ಬೂದಿಯಾಗಲಿ. ರಾಜಾಸ್ಥಾನದಲ್ಲಿ ಮಂತ್ರಿಗಳಿದ್ದಾರೆ; ಸರದಾರರಿದ್ದಾರೆ. ಅವರ ಧರ್ಮ ಬುದ್ಧಿ ಮತ್ತು ಔದಾರ್ಯಗಳು ಲೋಕೋತ್ತರವಾದವುಗಳು. ಅವರು ತಮ್ಮ ಅರಸನಿಗೆ ವಿವೇಕದ ಹಾದಿಯನ್ನು ತೋರಿಸಲಿ."

"ನೀವೇನು ನೋಡುವಿರಿ. ರಾಣಿಯನ್ನು ಮುಟ್ಟಲು ಅಂಜಿಕೆಯಾಗುವುದೇ? ನಿಮ್ಮ ಅರಸನು ಆಜ್ಞಾಪಿಸುತಿದ್ದಾನೆ. ರಾಣಿಯನ್ನು ಸೆರಮನೆಗೆ ಸೆಳೆದುಕೊಂಡು ಹೋಗಿರಿ." ಸಾಂತಣ್ಣ ರಾಣಿಗೆ ಮಾರ್ನುಡಿಯದೆ, ರಾಣಿಯನ್ನು ಸೆಳೆದುಕೊಂಡು ಹೋಗಲು ಅಳುಕುತಿದ್ದ ಸೈನಿಕರಿಗೆ ಆಜ್ಞಾಪಿಸಿದ.

"ಪ್ರಭೂ, ನಾನೂ ಅರಸನ ಪ್ರಜೆ. ದೊರೆಯ ಆಜ್ಞೆಯನ್ನು ನೆತ್ತಿಯಲ್ಲಿ ಹೊರಬೇಕಾದುದು ಪ್ರಜೆಯ ಹೊಣೆ." ರಾಣಿ ಹೇಳಿದಳು: "ಭಟರು ನನ್ನನ್ನು ಸೆರೆಗೆ ಸೆಳೆದುಕೊಂಡು ಹೋಗಬೇಕಾಗಿಲ್ಲ. ನಾನಾಗಿಯೇ ಸೆರೆಮನೆಯನ್ನು ಸೇರುವೆನು. ಆದರೆ ನನ್ನ ಸೇವೆಗೆ ಇರ್ವರು ದಾಸಿಯರನ್ನು ಪ್ರಭುಗಳು ಅನುಮತಿಸಬೇಕು." ಎಂದು ನುಡಿದ ರಾಣಿ ದಾಸಿಯರೊಡನೆ ಸೆರೆಮನೆಗೆ ತೆರಳಿದಳು. ಭಟರು ಅರಸನ ಅಪ್ಪಣೆಯಂತೆ ಆಕೆಯನ್ನು ಹಿಂಬಾಲಿಸಿದರು.

"ಒಡೆಯರೇ, ರಾಣಿಯನ್ನು ಮರಳಿ ಕರೆಯಬೇಕೆಂದು ನಾನು ಸನ್ನಿಧಿಯಲ್ಲಿ ಅರಿಕೆ ಮಾಡುವೆನು" ದುಗ್ಗಪ್ಪ ರಾಜನಲ್ಲಿ ವಿನಂತಿಸಿದ.

"ಹೌದು ಪ್ರಭು, ತಾವು ಮಾಡಿದ ಆಜ್ಞೆ ನ್ಯಾಯವಾದುದೇ ಎಂದು ಒಮ್ಮೆ ಪರಾಮರ್ಶಿಸುವುದು ಅಗತ್ಯ." ನೀಲಣ್ಣ ದುಗ್ಗಪ್ಪನ ಕೋರಿಕೆಗೆ ಬೆಂಬಲವಾದ: "ಇಲ್ಲದಿದ್ದರೆ ತಮಗೆ, ರಾಣಿಗೆ ಮತ್ತು ರಾಜಕುಮಾರರಿಗೆ ಬಹು ಹಿಂಸೆಯಾಗುವುದು."

"ಪ್ರಭು, ರಾಣಿಯ ನಡೆನುಡಿಗಳಲ್ಲಿ ಯಾವ ದೋಷವೂ ಕಾಣಿಸು ವುದಿಲ್ಲ." ದುಗ್ಗಪ್ಪ ನುಡಿದ: "ಅವರು ಕಲಂಕರಹಿತರೆಂದು ನನಗೆ ಅನಿಸುವುದು. ಸಾಧ್ವಿಯ ಕಣ್ಣೀರು ನಾಡನ್ನು ಸುಟ್ಟು ಬೆಂಗಾಡಾಗಿಸುವುದು."

"ದುಗ್ಗಪ್ಪ, ನಾನು ಮೂರ್ಖನಲ್ಲ; ಅಥವಾ ಬುದ್ಧಿಯನ್ನು ಕಳೆದು ಕೊಂಡ ಮರುಳನಲ್ಲ." ಅರಸನು ತನ್ನ ಸಂಶಯ ಸಾಧಾರವಾದುದೆಂದು ವಿವರಿಸತೊಡಗಿದ: "ರಾಣಿ ಸಾಧ್ವಿಯಲ್ಲ ಎಂಬುದಕ್ಕೆ ಸಾಕಷ್ಟು ಆಧಾರ ಗಳಿವೆ. ಅವಳೇಕೆ ಹನುಮಣ್ಣನೊಡನೆ ಉದ್ಯಾನದಲ್ಲಿ ವಿಹರಿಸಿದಳು? ಅವ ಳೇಕೆ ಅವನನ್ನು ಸಂತೋಷಗೊಳಿಸಲು ಗೀತಿಕೆಗಳನ್ನು ಹಾಡಿದಳು? ಅವ ನೊಡನೆ ಆಕೆ ಚದುರಂಗವಾಡಿದುದೇಕೆ? ಹನುಮಣ್ಣ ಅವಳ ಚಿತ್ರವನ್ನೇಕೆ ಬರೆದನು? ಅವನೇಕೆ ನನಗೆ ತಿಳಿಸದೆ ನಾಡನ್ನು ಬಿಟ್ಟು ಓಡಿದನು? ಈ ಸಂಗತಿ ಗಳು ರಾಣಿ ಪಾಪ ಮಾಡಿದಳೆಂಬುದನ್ನು ಸಾರಿ ಹೇಳುವುವು!"

"ಪ್ರಭು, ಗಂಗವಳ್ಳಿಯ ಅರಸರು ತಮ್ಮ ಆಮಂತ್ರಣದಂತೆ ಹೊನ್ನ ಹಳ್ಳಿಗೆ ಅತಿಥಿಯಾಗಿ ದಯಮಾಡಿಸಿದರು." ದುಗ್ಗಪ್ಪ ತನ್ನ ಸಂದೇಹವನ್ನು ವ್ಯಕ್ತಗೊಳಿಸಿದ: "ಮಾನ್ಯ ಅತಿಥಿಯನ್ನು ಸತ್ಕರಿಸಿ ಉಪಚರಿಸುವುದು ಗೃಹಿಣಿಯ ಧರ್ಮವೆಂದು ಭಾವಿಸಿ ರಾಣಿ ಈ ಕಾರ್ಯಗಳನ್ನೆಲ್ಲಾ ಮಾಡಿ ದರು ಎಂದು ನನಗನಿಸುವುದು."

"ನಿಮಗೆ ಯಾರಿಗೂ ನನ್ನಲ್ಲಿ ವಿಶ್ವಾಸವಿಲ್ಲ; ನಂಬಿಕೆಯಿಲ್ಲ." ಸಾಂತಣ್ಣನ ಕೊರಳಿಂದ ಸಿಡುಕಿನ ಧ್ವನಿ ಹೊರಟಿತು. "ಸಂದರ್ಭ ದೊರೆತಾಗ ನೀವೆಲ್ಲ ವೀರಣ್ಣನ ಹಾದಿಯನ್ನೇ ತುಳಿಯಲು ಸಿದ್ಧರಾಗಿರುವಿರಿ!"

"ಒಡೆಯರು ಹಾಗೆ ಭಾವಿಸಬಾರದು. ನಮ್ಮ ಜೀವಮಾನವನ್ನೆಲ್ಲಾ ಸಿಂಹಾಸನದ ಸೇವೆಯಲ್ಲಿ ತೇದಿದ್ದೇವೆ, ಎಂಬುದನ್ನು ತಾವು ಮರೆಯಬಾರದು." ಆ ವರೆಗೆ ಮೌನವನ್ನಾವಲಂಬಿಸಿದ್ದ ಸಂಕಣ್ಣ ಅರಸನ ನುಡಿಗೆ ಪ್ರತಿಹೇಳಿದ.

"ರಾಣಿ ಅಪರಾಧಿನಿಯೆಂಬುದು ನನಗೆ ಖಚಿತವಾಗಿ ಹೋಗಿದೆ. ಅವಳ ಪ್ರತಿಯೊಂದು ಗೈಮೆಯೂ ಅವಳು ತಪ್ಪುಗಾರ್ತಿಯೆಂಬುದಕ್ಕೆ ಆಧಾರವಾ ಗಿದೆ." ಸಾಂತಣ್ಣ ಹೇಳಿದ: "ಆದರೂ ನಿಮ್ಮೆಲ್ಲರ ತೃಪ್ತಿಗಾಗಿ ದೈವವನ್ನು ಕೇಳಲು ಕೊಲ್ಲೂರು ಮೂಕಾಂಬಿಕೆಯ ಸನ್ನಿಧಿಗೆ ದೂತರನ್ನು ಕಳುಹು ವೆನು. ಅವರು ದೈವವನ್ನು ಕೇಳಿಬರಲಿ, ಅಲ್ಲಿಯ ವರೆಗೆ ರಾಣಿಯ ವಿಚಾರಣೆ ಯನ್ನು ತಡೆಯುವೆನು."

ಅರಸನ ನುಡಿ ಸರದಾರರಿಗೆಲ್ಲ ಸೂಕ್ತವಾಗಿ ಕಂಡಿತು. ರಾಣಿ ನಿರಪರಾಧಿನಿಯಾಗಿದ್ದರೆ ಕಾರಣಿಕವುಳ್ಳ ದೇವರಿಗೆ ಅದು ತಿಳಿಯದೆ ಇರದು. ದೈವದ ಅರುಳು ಎಂದಿಗೂ ಸತ್ಯವಾಗದೆ ಇರದು. ಮಾನವನಿಂದ ಶೋಧಿಸಲಾಗದ ಸತ್ಯವನ್ನು ಹುಡುಕುವ ಕಾರ್ಯವನ್ನು ದೇವರಿಗೆ ಒಪ್ಪಿಸುವುದೇ ಲೇಸೆನಿಸಿತು. ಅವರು ಸಮಾಧಾನ ತಾಳಿದರು.

ಸಾಂತಣ್ಣ, ದುಗ್ಗಪ್ಪ ಸಂಕಣ್ಣರನ್ನು ಕರೆದು, "ನೀವಿಬ್ಬರೂ ದೈವವಾಣಿಯನ್ನು ತರಲು ಹೋಗುವುದು ಸೂಕ್ತ. ಸಾಮಾನ್ಯ ದೂತರು ಹೋದರೆ, ಅವರು ತಂದ ದೈವವಚನದಲ್ಲಿ ನನಗೆ ನಂಬಿಕೆಹುಟ್ಟದು. ಆದುದರಿಂದ ನಿವಿಬ್ಬರೂ ಕೊಲ್ಲೂರಿಗೆ ಹೋಗಿ ದೇವಿಯನ್ನು ಕೇಳಿಬನ್ನಿರಿ." ಎಂದು ಆಣತಿಗೈದ.

ದುಗ್ಗಪ್ಪ ಸಂಕಣ್ಣರು "ಹಸಾದ"ವೆಂದು ರಾಜಾಜ್ಞೆಯನ್ನು ಮಸ್ತಕಗಳಲ್ಲಿ ಹೊತ್ತರು. ಅವರು ಮರುದಿನ ಕುದುರೆಗಳನ್ನೇರಿ ಕೊಲ್ಲೂರು ಮಾರ್ಗವನ್ನು ಹಿಡಿದರು.

---

## ಏಳು

ಅರಗುವರ ಮಾದಣ್ಣನಿಗೆ ತಾಯಿಯ ಸಾನ್ನಿಧ್ಯ ತಪ್ಪಿಹೋಯಿತು. ಅವನು ಪುಟ್ಟ ಮಗುವಲ್ಲ. ಪ್ರಾಯ ಹನ್ನೆಡರ ಮನೆಯನ್ನು ದಾಟಿತ್ತು. ಪ್ರಪಂಚದ ಅರಿವನ್ನು ಗ್ರಹಿಸುವಷ್ಟು ಅವನ ಬುದ್ಧಿ ಬಲಿತಿತ್ತು. ತಂದೆ ಅಪ್ಪನನ್ನು ಸೆರೆಮನೆಗೆ ಅಟ್ಟಿದುದೇಕೆಂದು ಅವನಿಗೆ ಅರುಹದೆ ಹೋದರೂ, ದಾಸಿಯರ ಮತ್ತು ಸೇವಕರ ಮಾತುಕತೆಗಳಿಂದ ತಾಯಿಯ ಮೇಲೆ ಹೊರಿಸಿದ ಆರೋಪವೇನು, ಎಂಬುದರ ಅರಿವು ಅವನಿಗಾಯಿತು. ತಾಯಿಗಾದ ಅವಮಾನ ಅವನ ಮೃದುಹೃದಯಕ್ಕೆ ತೀವ್ರ ವೇದನೆಯನ್ನುಂಟುಮಾಡಿತು. "ನೀನು ಅವಳ ಮಗನಲ್ಲ." ಎಂಬ ತಂದೆಯ ಕಠೋರ ವಚನ ಆಗಾಗ ಅವನ ಕಿವಿಗಳಲ್ಲಿ ಪ್ರತಿಧ್ವನಿಗೊಂಡಿತು. ಆ ಎಳೆಯ ಮನಸ್ಸನ್ನು ಚಿಂತೆ ಕವಿಯಿತು.

ತನ್ನ ಹಾಸಿಗೆಯನ್ನು ಸರಿಪಡಿಸಲು ಬಂದ ದಾಸಿಯೊಡನೆ ಮಾದಣ್ಣ "ನಾನಿಲ್ಲಿ ಮಲಗುವುದಿಲ್ಲ. ಅಪ್ಪನಿರುವಲ್ಲಿಯೇ ಮಲಗುವೆನು." ಎಂದು ಹೇಳಿದ.

"ಚಿಕ್ಕೊಡೆಯರೇ, ನೀವು ಇಲ್ಲಿಯೇ ಮಲಗಬೇಕು ಎಂದು ದೊರೆಗಳ

ಅಪ್ಪಣೆಯಾಗಿದೆ." ದಾಸಿ ಚೆನ್ನಕ್ಕ ಮಾರ್ನುಡಿದಳು: "ನೀವು ರಾಣಿಯವ ರನ್ನು ನೋಡಕೂಡದೆಂದು ಅರಸರ ಆಜ್ಞೆಯಾಗಿದೆ."

"ಅವ್ವನನ್ನು ನಾನು ನೋಡಬಾರದು! ಅವ್ವನನ್ನು ನಾನು ನೋಡ ಬಾರ ದು!" ಎಂದು ಮಾದಣ್ಣ ಕಣ್ಣುಗಳಿಂದ ನೀರು ಸುರಿಸುತ್ತಾ ಉದ್ಗಾರವೆತ್ತಿದ.

ರಾಜಕುಮಾರ ಸೇವಕಿ ಅಣಿಗೊಳಿಸಿದ ಹಾಸಿಗೆಯ ಮೇಲೆ ಹೊರಳಿದ. ಚೆನ್ನಕ್ಕ ಹೊದಿಕೆಯನ್ನು ಹೊದೆಸಿದಳು. ಆದರೆ ಅವನಿಗೆ ನಿದ್ದೆ ಬರಲಿಲ್ಲ. ಅವನು ಹಾಸಿಗೆಯ ಮೇಲೆ ಅತ್ತಲಿಂದಿತ್ತ ಹೊರಳಿದ. ನೇತ್ರಗಳಿಂದ ಹರಿದ ಕಣ್ಣೀರಿನಿಂದ ತಲೆದಿಂಬು ತೊಯ್ದುಹೋಯಿತು. "ಅವ್ವಾ, ನಿನ್ನನ್ನು ನೋಡದಿರಲು ನಾನು ಮಾಡಿದ ತಪ್ಪೇನು." ಎಂದು ಅವನು ಬಿಕ್ಕುತ್ತಾ ಅಳತೊಡಗಿದ. ಅವನ ಅಳಲನ್ನು ಕೋಣೆಯ ನಾಲ್ಕು ಗೋಡೆಗಳು ಮಾತ್ರ ಕೇಳಿದುವು.

ಬೆಳಗಿನ ಜಾವದಲ್ಲಿ ತಂಗಾಳಿ ಬೀಸಿದಾಗ ಮಾದಣ್ಣನಿಗೆ ಜಂಪುಹತ್ತಿತು. ನಿದ್ದೆವೆಣ್ಣು ಅವನನ್ನೆತ್ತಿ ತನ್ನ ಮಡಿಲಲ್ಲಿ ಇರಿಸಿಕೊಂಡು ಸಂತೈಸಿದಳು. ಅವನ ಎದೆಯಳಲನ್ನು ಕಳೆಯಲು ಪ್ರಯತ್ನಿಸಿದಳು.

ಪ್ರತಿನಿತ್ಯ ತಾಯಿ ರೇವಕ್ಕನೇ ಬೆಳ್ಳಿಯ ತಳಿಗೆಯಲ್ಲಿ ತಿಂಡಿ ತಿನಸು ಗಳನ್ನೂ ಹಣ್ಣು ಹಂಪಲುಗಳನ್ನೂ ಮಗನಿಗೆ ತಿನ್ನಲು ಕೊಡುತ್ತಿದ್ದಳು. ಹೊನ್ನ ಗಿಂಡಿಯಲ್ಲಿ ಕಲ್ಲುಸಕ್ಕರೆ ಕೇಸರಿಗಳನ್ನು ಬೆರಸಿದ ಸವಿ ಹಾಲನ್ನು ನೀಡುತಿದ್ದಳು. ಹುಡುಗನು ಬಾಯಿತುಂಬಾ ತಿಂಡಿಯನ್ನು ತುರುಕಿಕೊಂಡು ಗಿಂಡಿಯಿಂದ ಹಾಲು ಈಂಟುತಿದ್ದಾಗ ತಾಯಿ ಅಭಿಮಾನ ಬೆರೆತ ಮುಗುಳ್ನಗೆ ಯೊಡನೆ ಮಗನ ಮೊಗವನ್ನು ಕಣ್ಣುತುಂಬಾ ನೋಡುತಿದ್ದಳು. ಈ ದಿನ ಬೆಳ್ಳಿಯ ತಳಿಗೆಯಲ್ಲಿ ತಿಂಡಿತಿನಸುಗಳೂ, ಹೊನ್ನ ಗಿಂಡಿಯಲ್ಲಿ ಹಾಲೂ ಬಂದುವು. ಆದರೆ ಅವುಗಳನ್ನು ತಂದುದು ತಾಯಿಯಾಗಿರಲಿಲ್ಲ. ತಂದವಳು ದಾದಿ ಚೆನ್ನಕ್ಕ. ಅವಳು ತಳಿಗೆ ಗಿಂಡಿಗಳನ್ನು ಮಾದಣ್ಣನ ಮುಂದಿರಿಸಿ, "ಚಿಕ್ಕ ಒಡೆಯರು ಆಹಾರವನ್ನು ಒಪ್ಪಿಸಿಕೊಳ್ಳಬೇಕು." ಎಂದು ನುಡಿದಳು.

ಅವ್ವನೆಲ್ಲಿ? ನನಗೆ ತಿಂಡಿ ಹಾಲುಗಳನ್ನು ಅವ್ವನೇ ತಂದುಕೊಡಬೇಕು. ಇಲ್ಲದಿದ್ದರೆ ನಾನು ತಿಂಡಿಯನ್ನು ಮುಟ್ಟಲಾರೆ."

"ಅವ್ವ ಇಲ್ಲಿಗೆ ಬರಲಾರರು. ನೀವು ತಿಂಡಿ ತೆಗೆದುಕೊಳ್ಳದಿದ್ದರೆ ದೊರೆಗಳು ಕೋಪಗೊಳ್ಳುವರು."

"ಒಳ್ಳೆದೇ ಆಯಿತು. ಅಪ್ಪ ನನ್ನನ್ನು ಶಿಕ್ಷಿಸಲೆಂದು ಸೆರೆಮನೆಗೆ ಕಳುಹಿಸುವರು. ಆಗ ಅಲ್ಲಿ ನನಗೆ ಅವ್ವನ ಜತೆ ಸಿಗುವುದು."

ಹುಡುಗನ ಮಾತುಗಳನ್ನು ಕೇಳಿ ದಾದಿ ಚೆನ್ನಕ್ಕನ ಕಣ್ಣುಗಳಲ್ಲಿ ನೀರು ತುಂಬಿತು. ಬೆದರಿಕೆಗೆ ಬಾಲಕನು ಮಣಿಯನೆಂಬುದು ಅವಳಿಗೆ ಅರಿವಾಯಿತು. ಅವಳು "ನೀವು ಬಹು ಒಳ್ಳೆಯವರು. ನಾನು ನಿಮ್ಮನ್ನು ದೋಣಿಯಾಡಲು ಹೊಳೆಗೆ ಕರೆದುಕೊಂಡು ಹೋಗುವೆನು. ಈಗ ತಿಂಡಿಯನ್ನು ತೆಗೆದುಕೊಳ್ಳಿರಿ." ಎಂದು ಹೇಳಿದಳು.

"ಇಲ್ಲ, ಅವ್ವನನ್ನು ಕಾಣದೆ ಒಂದು ತುತ್ತು ತಿಂಡಿಯನ್ನಾದರೂ ಬಾಯಿಗೆ ಹಾಕಿಕೊಳ್ಳೆ"ನೆಂದು ಮಾದಣ್ಣ ಜಪಿಸತೊಡಗಿದ.

"ಸಣ್ಣೊಡೆಯ, ನೀವು ಜಾಣರು! ಈಗ ನೀವು ಆಹಾರವನ್ನು ತೆಗೆದುಕೊಳ್ಳಿರಿ. ಅನಂತರ ನಿಮ್ಮನ್ನು ಕರೆದುಕೊಂಡು ಹೋಗಿ ರಾಣಿಯವರನ್ನು ತೋರಿಸುವೆನು." ಎಂದು ಚೆನ್ನಕ್ಕ ಹೇಳಿದಳು.

"ಇದು ನಿಜವೇ ?"

"ನಿಜ." ಎಂದಳು ದಾದಿ.

ಮಾದಣ್ಣ ಕೈಚಾಚಿ ತಳಿಗೆಯಿಂದ ತಿಂಡಿಗಳನ್ನು ತೆಗೆದುಕೊಂಡು ಗಬಗಬನೆ ತಿನ್ನತೊಡಗಿದ. ಅವನು ಹೊನ್ನಗಿಂಡಿಯನ್ನು ಎತ್ತಿಕೊಂಡು ಗಳಗಳನೆ ಹಾಲನ್ನು ಕುಡಿದ. ಒಂದು ಕ್ಷಣದಲ್ಲಿ ಅವನು ತಿಂಡಿಯನ್ನು ತಿಂದು ಮುಗಿಸಿದ. ಅನಂತರ ಅವನು "ಎಲ್ಲಿ ಚೆನ್ನಕ್ಕ, ನನ್ನನ್ನು ಅವ್ವನಿದ್ದಲ್ಲಿಗೆ ಕರೆದುಕೊಂಡು ಹೋಗು." ಎಂದು ಹೇಳಿದ.

ಚೆನ್ನಕ್ಕ, ತಾನು ಕೊಟ್ಟ ಮಾತಿನಂತೆ ಮಾದಣ್ಣನನ್ನು ತಾಯಿಯ ಸಮೀಪಕ್ಕೆ ಕರೆದುಕೊಂಡು ಹೋಗಲಿಲ್ಲ. ಮಾದಣ್ಣ ಚೆನ್ನಕ್ಕ ತನಗೆ ಮೋಸಮಾಡಿದಳೆಂದು ಬಿಕ್ಕಿ ಬಿಕ್ಕಿ ಅಳತೊಡಗಿದ. ಅವಳು ಯಾವ ಪರಿಯಿಂದ ಸಮಾಧಾನಪಡಿಸಿದರೂ ಅವನು ಅಳು ನಿಲ್ಲಿಸಲಿಲ್ಲ.

ಚೆನ್ನಕ್ಕ ಕೊನೆಗೆ ಉಪಾಯಗಾಣದೆ ರಾಜಸನ್ನಿಧಿಗೆ ತೆರಳಿದಳು. ಸಾಂತಣ್ಣ ಅವಳನ್ನು ಕಾಣಲು, "ರಾಜಕುಮಾರ ಸೊಗವಾಗಿರುವನೇ ?" ಎಂದು ಪ್ರಶ್ನಿಸಿದ.

"ಅವರು ಬಹು ಬೇಸರದಲ್ಲಿ ಇದ್ದಾರೆ ಪ್ರಭುಗಳೇ" ದಾದಿ ಅರಸನ ಪಾದಗಳಿಗೆ ಮಣಿದು ಅರಿಕೆ ಮಾಡಿದಳು: "ಚಿಕ್ಕರಸರು ರಾತ್ರಿ ನಿದ್ರೆ

ಮಾಡಲಿಲ್ಲ. ಇರುಳೆಲ್ಲ ಅಳುತ್ತಲೇ ಮಲಗಿದ್ದರು. ಮುಂಜಾನೆ ಮಾತ್ರ ತುಸು ನಿದ್ದೆ ಮಾಡಿದರು. ಅವರ ಕಣ್ಣುಗಳು ಅತ್ತು ಅತ್ತು ಕೆಂಪಾಗಿವೆ. ಬೆಳಿಗ್ಗೆ ತಾವು ರಾಣಿಯವರನ್ನು ಕಾಣದೆ ಉಣುವುದಿಲ್ಲವೆಂದು ಹಟಹಿಡಿದಿದ್ದರು."

"ಮಾದಣ್ಣ ಯಾವ ಆಹಾರವನ್ನೂ ತೆಗೆದುಕೊಳ್ಳಲಿಲ್ಲವೇ?"

"ಉಂಡ ಅನಂತರ ರಾಣಿಯವರನ್ನು ತೋರಿಸುವೆನೆಂದು ಹೇಳಿದಮೇಲೆ ಒಂದಿಷ್ಟು ತಿಂಡಿಯನ್ನು ತೆಗೆದುಕೊಂಡರು. ಈಗ ರಾಣಿಯವರನ್ನು ತೋರಿಸಿಯೇ ತೀರಬೇಕೆಂದು ಹಟತೊಟ್ಟಿದ್ದಾರೆ."

ಸಾಂತಣ್ಣನ ಕಣ್ಣುಗಳು ಕುರುಡಾಗಿದ್ದುವು. ಅವನ ಬುದ್ಧಿ ಮಗನ ಮಾತೃ ಪ್ರೇಮವನ್ನೂ ಶಿಶುವಿನ ಮೃದುಹೃದಯವನ್ನೂ ಗ್ರಹಿಸಲಾರದೆ ಹೋಯಿತು. ಅವನು ಎಳೆಯ ಮನಸ್ಸಿನ ಕೋಮಲಭಾವಗಳನ್ನು ಗ್ರಹಿಸದೆ ಹೋದ. ಮಗುವಿನ ಅಳಲು ಅವನ ಕಲ್ಲೆದೆಯನ್ನು ಕರಗಿಸಲಿಲ್ಲ. ಪ್ರೇಮವಾತ್ಸಲ್ಯಗಳ ಸ್ಪರ್ಶದಿಂದ ಚೇತನಗೊಳ್ಳದ ಜಡವಸ್ತುವಾಯಿತು ಅವನ ಹೃದಯ. ಅವನು "ಮಾದಣ್ಣ ಹಟಹಿಡಿದು ಸ್ವಲ್ಪ ಹೊತ್ತು ಅತ್ತಾನು. ಅನಂತರ ಸುಮ್ಮನಾಗುತ್ತಾನೆ." ಎಂದು ಹೇಳಿದ.

"ಒಡೆಯರೇ, ಮಗು ಕೊರಗಿ ಕೊರಗಿ ಬಡವಾದೀತು. ಪುಟ್ಟರಸರಿಗೆ ರಾಣಿಯನ್ನು ತೋರಿಸಿದರೆ ಅವರ ದುಃಖ ಸ್ವಲ್ಪ ಸಮಾಧಾನವಾದೀತು."

"ಚೆನ್ನಕ್ಕ, ನೀನು ತುಟಿಗಳನ್ನು ಸ್ವಲ್ಪ ಬಿಗಿಹಿಡಿ." ಸಾಂತಣ್ಣ ಸಿಡಿಲಂತೆ ಗರ್ಜಿಸಿದ: "ಆಳುಕಾಳಿಂದ ಉಪದೇಶ ಪಡೆಯುವ ಹಂತಕ್ಕೆ ನಾನು ಇನ್ನೂ ಇಳಿದಿಲ್ಲ. ರಾಜಕುಮಾರನು ರಾಣಿಯನ್ನು ನೋಡಕೂಡದು. ಇದು ನನ್ನ ಕಟ್ಟಾಜ್ಞೆ!"

"ತಾಯಿಯನ್ನು ಕಾಣದಿದ್ದರೆ ಚಿಕ್ಕ ಅರಸರು ಅತ್ತು ಅತ್ತು ಬಡವಾಗುವರು."

"ತಾಯಿಯನ್ನು ನೆನೆಯಕೂಡದೆಂದು ಮಾದಣ್ಣನಿಗೆ ಹೇಳು." ಸಾಂತಣ್ಣನ ತುಟಿಗಳಿಂದ ನಿಷ್ಠುರವಚನ ಬಿರಿದುಬಂತು: "ಅವನು ರಾಣಿಯನ್ನು ನೋಡಬಯಸುವುದಾದರೆ ನನ್ನ ಮಗನೇ ಅಲ್ಲ!"

ಸಾಂತಣ್ಣ ಹುಬ್ಬುಗಂಟಿಕ್ಕಿ ಚೆನ್ನಕ್ಕನನ್ನು ನೋಡಿದ. ರಾಜಾಜ್ಞೆಗೆ ಪ್ರತಿಹೇಳಲು ಅವಳು ಸಾಹಸಪಡಲಿಲ್ಲ. ಕಣ್ಣುಗಳಿಂದ ಮಿಡಿದ ಹನಿಗಳನ್ನು ಸೀರೆಯ ಸೆರಗಿನಿಂದ ತೊಡೆಯುತ್ತಾ ಅವಳು ರಾಜಸನ್ನಿಧಿಯಿಂದ ಮರಳಿದಳು.

ಸಾಂತಣ್ಣ ತಾನಾಡಿದ ನಿಷ್ಠುರೋಕ್ತಿಯ ಪರಿಣಾಮವೇನಾಗುವುದೆಂಬುದನ್ನು ಅರಿಯನು. ಅವನು ಬುದ್ಧಿಯನ್ನು ದ್ವೇಷ ಮತ್ಸರಗಳ ವಶಕ್ಕೊಪ್ಪಿಸಿದ ಮರುಳನಾಗಿದ್ದ.

ರಾಣಿ ರೇವಕ್ಕ ಕಾರಾಗೃಹದಲ್ಲಿ ದಿನಕಳೆಯತೊಡಗಿದಳು. ಅವಳ ಸೇವೆಗೆ ಇಬ್ಬರು ದಾಸಿಯರಿದ್ದರು. ಚಿಂತೆ ಅವಮಾನಗಳ ಕಿಚ್ಚುಗಳು ಅವಳ ಅಂತರಂಗವನ್ನು ಸುಡುತ್ತಿದ್ದುವು. ಆದರೆ ಆಕೆ ತನ್ನ ಪತಿಯನ್ನು ಜರೆಯದೆ ನಿಂದಿಸದೆ ಎಲ್ಲವೂ ತನ್ನ ದುರದೃಷ್ಟವೆಂದು ಭಾವಿಸಿ, ಶೋಕಾವಮಾನಗಳನ್ನು ಮೌನವಾಗಿ ಸಹಿಸಿದಳು. ಪತಿಯು ಮಗನಿಗೆ ತನ್ನನ್ನು ತೋರಲು ಅನುಮತಿಸಲಿಲ್ಲವೆಂಬುದನ್ನು ಅರಿತಾಗ ಆಕೆಗೆ ಹುಣ್ಣಿನ ಮೇಲೆ ಬೊಕ್ಕೆ ಎದ್ದಂತಾಯಿತು.

ತಾನು ಅಪರಾಧಿಯಾಗಿರಬಹುದು; ಆದರೆ ಬಾಲಕನು ಮಾಡಿದ ತಪ್ಪೇನು? ಆತನನ್ನು ಒಮ್ಮೆಯಾದರೂ ತನ್ನ ಸನಿಹಕ್ಕೆ ಕಳುಹಿಸಿಕೊಡಬೇಕೆಂದು ದೊರೆಯನ್ನು ಕೇಳಲು ರೇವಕ್ಕ ಆಲೋಚಿಸಿದಳು. ಹಾಗೆ ಕೇಳುವುದರಿಂದ ದೊರಕುವ ಭಾಗ್ಯವಾದರೂ ಏನು? ತನ್ನ ಪತಿಯ ಚಲವನ್ನು ಅವಳು ಬಲ್ಲಳು. ತಾನು ಹಿಡಿದ ಮೊಲಕ್ಕೆ ಮೂರು ಕೊಂಬು ಎಂದು ಸಾಧಿಸುವ ಬುದ್ಧಿ ಆತನದು. ಮಾತುಗಳನ್ನು ವ್ಯಯ ಮಾಡುವುದೇಕೆ? ಬರುವುದೆಲ್ಲಾ ಬರಲಿ! ಭಗವಂತನ ದಯೆಯೊಂದಿರಲಿ! ಎಂದು ರಾಣಿ ಮೌನವನ್ನು ಅವಲಂಬಿಸುವಳು.

ರಾಣಿಗೊಬ್ಬ ಗೆಳತಿಯಿದ್ದಳು. ಅವಳ ಹೆಸರು ನಂಜಮ್ಮ. ಅವಳು ಆಸ್ಥಾನದ ಸರದಾರ ನೀಲಣ್ಣನ ಮಡದಿ. ಅವಳು ಬಹು ಧೈರ್ಯಶಾಲಿನಿ. ಮಾತಿನಲ್ಲಿ ಅವಳನ್ನು ಸೋಲಿಸಿದವರೇ ಇಲ್ಲ. ಆದುದರಿಂದ ಅವಳ ಗಂಡ ನೀಲಣ್ಣ ಹೆದರಿ ಗಡಗಡನೆ ನಡುಗುತ್ತಿದ್ದ. ಈ ಬಾಯಿಬಡುಕಿಯಿಂದ ತನಗೆ ಉಳಿಗಾಲವಿಲ್ಲೆಂದು ಅವನು ಆಗಾಗ ಉದ್ಗಾರವೆತ್ತುತ್ತಿದ್ದ. ನಂಜಮ್ಮ ಮಾತಿನ ಮಲ್ಲಿಯಾದರೂ ಜಾಣೆ. ಪರ್ವತದ ತಪ್ಪಲಲ್ಲಿ ಹರಿಯುವ ಜರಿಯ ನೀರಂತೆ ಅವಳ ಮನಸ್ಸು ತಿಳಿಯಾದುದು. ಅವಳ ಅಂತಃಕರಣ ಪ್ರೀತಿಯಿಂದ ತುಂಬಿದುದು ಆದುದರಿಂದಲೇ ಅವಳು ರೇವಕ್ಕನ ಗೆಳತಿಯಾದಳು.

ರಾಣಿ ತನ್ನ ಪತಿಗೆ ಸಂತೋಷವಾಗಲೆಂದು ಹನುಮಣ್ಣನನ್ನು ಎಂಟು ದಿನ ಹೆಚ್ಚು ನಿಲ್ಲಬೇಕೆಂದು ಒತ್ತಾಯಿಸಿದ ವಾರ್ತೆಯನ್ನು ನಂಜಮ್ಮ ತಿಳಿದಾಗ "ರಾಣಿ, ನೀನು ಮಾಡಿದುದು ಒಳಿತಾಗಲಿಲ್ಲ." ಎಂದು ಹೇಳಿದಳು.

"ಏಕೆ ನಂಜು, ಹಾಗೆ ಹೇಳುವೆ?" ಎಂದು ರಾಣಿ ಪ್ರಶ್ನಿಸದಿರಲಿಲ್ಲ.

"ಅದನ್ನು ಈಗ ಹೇಳಲಾರೆ. ರಾಣಿ, ನೀನು ತಿಳಿಮನಸ್ಸಿನವಳು. ಅರಮನೆಯಲ್ಲಿ ಬದುಕಿಬಾಳಬೇಕಾದರೆ ಹದ್ದಿನ ಕಣ್ಣಿರಬೇಕು. ಇನ್ನಾದರೂ ಗಂಗವಳ್ಳಿಯ ಅರಸನ ವಿಷಯದಲ್ಲಿ ನೀನು ಜಾಗ್ರತೆ ವಹಿಸುವುದು ಒಳ್ಳೆಯದು."

"ಗಂಗವಳ್ಳಿಯ ಪ್ರಭುಗಳು ಉತ್ತಮ ಗುಣಸಂಪನ್ನರು. ಅವರು ಬಹು ಎತ್ತರವನ್ನು ಏರಿದ್ದಾರೆ. ಅಕ್ಕ, ನೀನು ಅವರ ಬಗ್ಗೆ ವಿನಾಕಾರಣ ಸಂಶಯ ತಾಳುವೆ." ಎಂದು ರೇವಕ್ಕ ನಂಜಮ್ಮನ ನುಡಿಗೆ ಬೇಸರಪಟ್ಟುಕೊಂಡಳು.

"ಇಲ್ಲ ರಾಣಿ, ಗಂಗವಳ್ಳಿಯ ಅರಸು ಬಂಗಾರದಂತಹ ಮನುಷ್ಯ. ಆದುದರಿಂದಲೇ ಇದು ಅನರ್ಥದಲ್ಲಿ ಕೊನೆಗೊಳ್ಳುವುದು ಎಂದು ನನಗನಿಸುವುದು" ಎಂದು ನಂಜಮ್ಮ ಮಾರ್ನುಡಿದಳು.

ರೇವಕ್ಕ ಅಂದು ನಂಜಮ್ಮನ ನುಡಿಯನ್ನು ಕಿವಿಗೆ ಹಾಕಿಕೊಂಡಿರಲಿಲ್ಲ. ನಂಜಮ್ಮ ತನ್ನ ಅತಿ ಬುದ್ಧಿವಂತಿಕೆಯಿಂದ ಹಿಡಿಮಣ್ಣನ್ನು ಗುಡ್ಡವನ್ನಾಗಿ ಮಾಡುತಿದ್ದಾಳೆ ಎಂದು ರಾಣಿಗೆ ಅನಿಸಿತ್ತು. "ಆದರೆ ಈಗ ಸೆರೆಮನೆಯನ್ನು ಸೇರಿದ ಮೇಲೆ ನಂಜಮ್ಮನ ಮಾತುಗಳಿಗೆ ಕಿವಿಗೊಟ್ಟಿದ್ದರೆ ದುಃಖಾವಮಾನಗಳ ಅಗ್ನಿಕುಂಡಕ್ಕೆ ಬೀಳದೆ ಪಾರಾಗಬಹುದಿತ್ತು" ಎಂದು ರಾಣಿಗೆ ಅನಿಸದಿರಲಿಲ್ಲ. ಆದರೆ ಹಾಲಿನ ಕೊಡ ನೆಲಕ್ಕುರುಳಿ ನೂರು ಚೂರಾಗಿದ್ದಿತು; ಹಾಲು ಚೆಲ್ಲಿಹೋಗಿತ್ತು.

ರಾಣಿಗೊದಗಿದ ದಾರುಣ ವಿಪತ್ತನ್ನರಿತು ನಂಜಮ್ಮ ಮಮ್ಮಲ ಮರುಗಿದಳು. ತಾನು ಮುಂದಾಲೋಚನೆಯಿಂದ ಸಲಹೆಗೊಟ್ಟರೂ ರಾಣಿ ಕಷ್ಟಕ್ಕೆ ಈಡಾದಳಲ್ಲ ಎಂದು ಅವಳು ವ್ಯಥೆಪಟ್ಟಳು. ಅವಳು ದಿನಕ್ಕೊಂದು ಸಲ ಸೆರೆಮನೆಗೆ ಬಂದು ರಾಣಿಯನ್ನು ಮಾತಾಡಿಸುತಿದ್ದಳು; ನಾಲ್ಕು ಸಾಂತ್ವನ ವಚನಗಳನ್ನು ಆಡುತಿದ್ದಳು. "ಸತ್ಯಸಂಧರನ್ನು ಪರೀಕ್ಷಿಸುವುದಕ್ಕೋಸ್ಕರ ದೇವರು ಈ ಬಗೆಯ ವಿಪತ್ತುಗಳನ್ನು ತಂದೊಡ್ಡುತ್ತಾನೆ; ಆ ದುಃಖ ಸಂಕಟಗಳಿಗೆ ಎದೆಯೊಡ್ಡಿ ಮುಂದೆ ಸಾಗಬೇಕು" ಎಂದು ನಂಜಮ್ಮ ರಾಣಿಗೆ ಧೈರ್ಯಗೊಡುವಳು; ಪುರಾಣಗಳಿಂದ ನಿದರ್ಶನ ಕತೆಗಳನ್ನು ಆರಿಸಿ ಹೇಳಿ, ರಾಣಿಯ ಎದೆಯ ಭಾರವನ್ನು ಹಗುರಗೊಳಿಸಲು ಹವಣಿಸುವಳು; ಮರುಕ ಒಲವುಗಳ ತಣ್ಣೀರನ್ನೆರೆದು ರಾಣಿಯ ಎದೆಯ ಕಿಚ್ಚನ್ನು ಆರಿಸಲು ಪ್ರಯತ್ನಿಸುವಳು.

ಇರುಳು ಕವಿದ ಬಾನಿನಂತಿದ್ದ ರಾಣಿಯ ಬಾಳುವೆಯಲ್ಲಿ ನಂಜಮ್ಮ ಮುಂದ ಪ್ರಕಾಶವನ್ನು ಪಸರಿಸುವ ಒಂದು ಕಿರುತಾರೆಯಾದಳು. ದಿನಕ್ಕೆ ಒಂದೆರಡುಗಳಿಗೆಗಳ ತನಕ ದೊರೆಯುತ್ತಿದ್ದ ನಂಜಮ್ಮನ ಒಡನಾಟ ಮರುಭೂಮಿಯಲ್ಲಿ ಅಲೆಯುತ್ತಿದ್ದ ಯಾತ್ರಿಕನಿಗೆ ದೊರೆತ ಸವಿನೀರ ಚಿಲುಮೆಯಂತೆ ರಾಣಿಗೆ ಆಪ್ಯಾಯಮಾನವಾಗಿದ್ದಿತು.

ನಂಜಮ್ಮ ತನ್ನ ಪತಿ ನೀಲಣ್ಣನ ಸಂಗಡ ರಾಣಿಯ ವಿಷಯದಲ್ಲಿ ನಾಲ್ಕು ಮಾತುಗಳನ್ನು ಆಡದಿರಲಿಲ್ಲ. ಅವಳು "ನೀವು ಮೀಸೆಹೊತ್ತ ಗಂಡಸರಂತೆ! ಅರಸರ ದಂಡಿನ ಸೇನಾನಿಗಳಂತೆ! ಅರಸನ ಕೋಪದ ತಾಪಕ್ಕೆ ಒಳಗಾದ ರಾಣಿಯನ್ನು ಕಾಯಲಾರದೆ ಹೋದಿರಿ" ಎಂದು ಹೇಳಿದಳು.

"ಏನುಮಾಡಲಿ ನಂಜು, ಈಗೀಗ ನಮ್ಮ ದೊರೆಗಳು ದೂರ್ವಾಸರ ಅವತಾರವೇ ಆಗಿದ್ದಾರೆ" ನೀಲಣ್ಣ ಹೇಳಿದ: "ರಾಣಿ ನಿರಪರಾಧಿಯೆಂದು ನನ್ನ ಅಂತರಂಗವೂ ಹೇಳುತ್ತಿದೆ."

"ರಾಣಿ ನಿರಪರಾಧಿಯೆಂದು ದೊರೆಗಳಿಗೆ ಹೇಳಿದ್ದರೆ ನಿಮ್ಮ ಗಂಟೇನು ಹೋಗುತಿದ್ದಿತು?"

"ಗಂಟೇನು ಹೋಗುತಿರಲಿಲ್ಲ. ಆದರೆ ನಿಜವನ್ನು ಹೇಳಿದರೆ ತಪ್ಪಿಗೆ ನನ್ನ ತಲೆಯನ್ನು ಮಾತ್ರ ದಂಡ ತರಬೇಕಾಗಿದ್ದಿತು!

"ದೊರೆಗಳು ಸೇನಾನಿ ನುಡಿದ ಸತ್ಯ ವಚನವನ್ನು ನಂಬಲಾರರೇ?"

"ಅವರ ಮನಸ್ಸಿನಲ್ಲಿ ಒಂದು ಸಂದೇಹ ಹೊಕ್ಕರೆ ಅದನ್ನೇ ಅವರು ನಿಜವೆಂದು ನಂಬುವರು. ಅದನ್ನೇ ಯಥಾರ್ಥವೆಂದು ಸಾಧಿಸಲು ಭಗೀರಥನಂತೆ ಪ್ರಯತ್ನಿಸುತ್ತಾರೆ" ನೀಲಣ್ಣ ಮಾರ್ನುಡಿದ: "ಆಗ ಅವರ ನುಡಿಗೆ ಪ್ರತಿ ಹೇಳುವವರೆಲ್ಲ ಹಗೆಗಳಾಗುತ್ತಾರೆ."

"ನಾನು ಗಂಡಾಗಿ ಹುಟ್ಟಿದ್ದರೆ ನಿಮ್ಮ ಮರುಳ ದೊರೆಗೆ ಬುದ್ಧಿ ಕಲಿಸುತಿದ್ದೆ." ಎಂದಳು ಸಿಟ್ಟಿನಿಂದ ನಂಜಮ್ಮ.

"ಹೆಣ್ಣಾದುದರಿಂದ ಈಗ ನನಗೆ ಬುದ್ಧಿಗಲಿಸುತ್ತಿರುವೆಯಲ್ಲ!"

"ಗಡ್ಡ ಹಣ್ಣಾದರೂ ನಿಮ್ಮ ಚೇಷ್ಟೆ ಮಾಯವಾಗಿಲ್ಲ" ಹುಸಿ ಮುನಿಸಿನಿಂದ ನಂಜಮ್ಮನ ಕೆನ್ನೆ ಕೆಂಪಡರಿತು.

"ನಂಜೂ, ಹುಣಿಸೆ ಹಣ್ಣು ಹಳೆಯದಾದರೂ, ಅದರ ಹುಳಿ ಹೋಗುವುದಿಲ್ಲ."

"ನೀವು ಹುಣಿಸೆ ಹಣ್ಣೆಂಬುದೇನೋ ನಿಜ. ನೀವೆಲ್ಲಾ ಸೇರಿ ರಾಣಿಯನ್ನು ಸೆರೆಮನೆಗೆ ಕಳುಹಿದಿರಿ. ಮತ್ತೆ ನಿಮ್ಮ ನಿಮ್ಮ ಮನೆಗಳಲ್ಲಿ ಮಡದಿಯರನ್ನೇಕ್ಕೆ ಇಟ್ಟುಕೊಂಡಿರುವಿರಿ. ನಿಮ್ಮ ದೊರೆಯಂತೆಯೆ, ನಿಮ್ಮ ಹೆಂಡಂದಿರನ್ನೆಲ್ಲಾ ಸೆರೆಮನೆಯೊಳಗೆ ಅಟ್ಟಿ ರಾಜಭಕ್ತರಾಗಿರಿ!"

"ನಿನ್ನ ಬಾಯಿಬಡುಕತನವನ್ನು ಕೇಳಿದಾಗ, ನಿನ್ನನ್ನು ಸೆರೆಮನೆಗೆ ಕಳುಹಿಸುವುದೇ ಮೇಲೆಂದು ಅನಿಸುತ್ತದೆ."

ಎಂದು ಹೇಳಿ ನೀಲಣ್ಣ ಮಾತು ಮುಗಿಸಿದ. ಅವನಿಗೆ ರಾಣಿಯ ಸುದ್ದಿ ಬೇಕಾಗಿರಲಿಲ್ಲ. ಮನೆಯಲ್ಲಾದರೂ ಅದನ್ನು ಮರೆಯೋಣವೆಂದು ಅವನು ಭಾವಿಸಿದ್ದ. ಆದರೆ ನಂಜಮ್ಮ ರಾಣಿಯ ಸುದ್ದಿಯನ್ನು ಮರೆಯಲು ಬಿಡಲಿಲ್ಲ.

---

## ಎಂಟು

ರಾಣಿಗೆ ತಿಂಗಳು ತುಂಬಿತು. ಒಂದು ದಿನ ರೇವಕ್ಕ ಸೆರೆಮನೆಯಲ್ಲಿ ಒಂದು ಹೆಣ್ಣು ಕೂಸನ್ನು ಪ್ರಸವಿಸಿದಳು. ಆಕೆಯ ಸೇವೆಗೆಂದು ಇದ್ದ ದಾಸಿಯರು ಶುಶ್ರೂಷೆ ಉಪಚಾರಗಳನ್ನು ಮಾಡಿದರು. ನಂಜಮ್ಮ ದಿನ ನಿತ್ಯ ಬಂದು ತಾಯಿ ಕೂಸುಗಳನ್ನು ನೋಡಿ ಮಾತಾಡಿಸಿಹೋಗುತಿದ್ದಳು. ಒಂದು ತಿಂಗಳು ಕಳೆಯಲು ರಾಣಿ ಬೆಸಲ ಬೇನೆಯನ್ನು ಕಳೆದು ಆರೋಗ್ಯವಂತಳಾದಳು.

ಒಂದು ದಿನ ರಾಣಿ ಕೂಸಿಗೆ ಮೊಲೆಯೂಡುತಿದ್ದಾಗ ನಂಜಮ್ಮ ಸೆರೆಮನೆಯೊಳಗೆ ಬಂದಳು. ರಾಣಿ ಹಾಲು ಕುಡಿಯುವ ಶಿಶುವಿನ ಮೊಗದಿಂದ ಕಣ್ಣು ತೆಗೆಯದೆ, "ಕೂಸೇ, ಸೆರೆಮನೆಯಲ್ಲಿ ಹುಟ್ಟಿದ ದೌರ್ಭಾಗ್ಯ ನಿನ್ನದು" ಎಂದು ಉದ್ಗಾರವೆತ್ತಿದಳು.

"ರಾಣಿ, ನೀನು ಕೂಸಿನ ಭಾಗ್ಯವನ್ನು ಹಳಿಯಬೇಡ" ನಂಜಮ್ಮ ನುಡಿದಳು: "ಅದರ ಅದೃಷ್ಟ ಹೇಗಿದೆಯೋ?"

"ಸೆರೆಮನೆಯಲ್ಲಿ ಹುಟ್ಟುವುದೂ ಒಂದು ಭಾಗ್ಯವೇ?"

"ಶ್ರೀ ಕೃಷ್ಣ ಸೆರೆಮನೆಯಲ್ಲಿ ಜನ್ಮತಾಳಲಿಲ್ಲವೇ? ಈ ಕೂಸು ಸೆರೆಮನೆಯಲ್ಲಿ ಹುಟ್ಟಿದುದೇ ಮುಂಬರುವ ಭಾಗ್ಯದ ಸೂಚನೆಯಾಗಿರಬಹುದು" ನಂಜಮ್ಮ ಒಂದು ಕ್ಷಣ ಮಗುವನ್ನೆ ನೋಡುತ್ತಾ ಮಾತು ಮುಂದುವರಿಸಿದಳು. "ಕೂಸನ್ನು ನೋಡುವಾಗ ನನಗೊಂದು ಆಲೋಚನೆ ಹೊಳೆಯುತ್ತಿದೆ.

"ಏನಕ್ಕ ಅದು?" ರಾಣಿ ಉತ್ಸುಕತೆಯಿಂದ ಪ್ರಶ್ನಿಸಿದಳು.

"ನೀನು ಒಪ್ಪುವಿಯೋ ಎಂಬುದೇ ನನಗಿರುವ ಸಂದೇಹ."

"ನೋಡು, ನನಗಿಂತಲೂ ನೀನು ಜಾಣೆ. ದೂರ ದೃಷ್ಟಿಯುಳ್ಳವಳು. ಹಿಂದೊಂದುಸಲ ನಿನ್ನ ನುಡಿಯನ್ನು ಕೇಳದಿದ್ದುದಕ್ಕೆ ಈ ಶಿಕ್ಷೆಯನ್ನು ಅನು ಭವಿಸುತಿದ್ದೇನೆ."

"ಹಿಂದಿನ ಹಳೆಯ ಕತೆಯನ್ನು ಕೆದಕುವುದರಲ್ಲಿ ಹುರುಳಿಲ್ಲ ರಾಣಿ." ನಂಜವ್ವ ಉಸುರಿದಳು. "ಈಗ ಮುಂದಿನ ಕತೆಗೆ ಅಡಿಪಾಯ ಹಾಕಬೇಕಾ ಗಿದೆ. ನಿನ್ನ ಕೂಸನ್ನು ನೋಡಿದಾಗ ಹೊಸದೊಂದು ಆಲೋಚನೆ ರೂಪ ಗೊಂಡಿತು. ಈ ಕೂಸನ್ನು ದೊರೆಗಳ ಸನ್ನಿಧಿಗೆ ತೆಗೆದುಕೊಂಡು ಹೋದರೆ ಹೇಗೆ?"

"ದೊರೆಗಳ ಸನ್ನಿಧಿಗೆ!" ರಾಣಿಯ ದನಿಯಲ್ಲಿ ಭಯ ವಿಸ್ಮಯಗಳು ಬೆರೆತಿದ್ದುವು.

"ಏಕೆ ರಾಣಿ? ಅಂಜಿಕೆಯಾಯಿತೇ? ಅರಸರು ಸಂಶಯ ದ್ವೇಷಗಳೆಂಬ ಗ್ರಹಗಳ ಬಾಯಿಗೆ ತುತ್ತಾಗಿರುವರು. ಆದುದರಿಂದ ನಿನ್ನನ್ನು ಬನ್ನಪಡಿಸಿ ದರು. ಈ ಕೂಸು ಆ ಗ್ರಹ ಬಾಧೆಯನ್ನು ಬಿಡಿಸೀತು! ತಮ್ಮ ನೆತ್ತರೇ ಹರಿಯುತ್ತಿರುವ, ತಮ್ಮ ಮೈಯ ಪ್ರತಿಬಿಂಬದಂತಿರುವ ಈ ಹಸುಳೆಯನ್ನು ಕಂಡಾಗ ಅವರ ಎದೆಯಲ್ಲಿ ಪ್ರೀತಿಯ ಚಿಲುಮೆ ಚಿಮ್ಮದಿರುವುದೇ? ದುಃಖದ ಮಡುವಿನಲ್ಲಿ ಮೂಡಿಬಂದ ಶಿಶು ನಿಮ್ಮಿಬ್ಬರ ಬಾಳುವೆಯನ್ನು ಬೆಸೆದೀತು!"

"ನಿನ್ನ ನುಡಿಗೆ ಪ್ರತಿಹೇಳೆನು ಅಕ್ಕ. ಮಗುವನ್ನು ದೊರೆಗಳ ಸನ್ನಿಧಾ ನಕ್ಕೆ ಕರೆದುಕೊಂಡು ಹೋಗುವುದು ಸೂಕ್ತವಾದರೆ ಕರೆದುಕೊಂಡು ಹೋಗು."

ಎಂದು ರಾಣಿ ನಂಜವ್ವನ ಆಲೋಚನೆಯನ್ನು ಒಪ್ಪಿದಳು. ನಂಜವ್ವ ರಾಣಿಯ ಭಂಡಾರಕ್ಕೆ ತೆರಳಿದಳು. ಅವಳು ಒಂದು ದೊಡ್ಡ ಹೊನ್ನ ತಳಿಗೆ ಯನ್ನು ಆರಿಸಿತೆಗೆದಳು; ಬಗೆಬಗೆಯ ಪುಟ್ಟ ಆಭರಣಗಳನ್ನು ಆರಿಸಿದಳು; ಉತ್ತಮವಾದ ಪಟ್ಟೆ ವಸ್ತ್ರಗಳನ್ನು ಹೆಕ್ಕಿ ತೆಗೆದಳು. ಇವೆಲ್ಲವನ್ನೂ ಗಂಟು ಕಟ್ಟಿ ಸೆರೆಮನೆಗೆ ತಂದಳು. ಅವಳು ಹೊನ್ನ ಹರಿವಾಣದ ಮೇಲೆ ಮೃದು ವಾದ ರೇಷ್ಮೆಯ ವಸ್ತ್ರವನ್ನು ಹಾಸಿದಳು. ಮಗುವಿನ ಕೈಕಾಲುಗಳಿಗೆ ಪುಟ್ಟ ಹೊನ್ನ ಬಳೆಗಳನ್ನು ತೊಡಿಸಿದಳು. ಬೆರಳುಗಳಿಗೆ ಪುಟ್ಟ ಉಂಗುರಗಳನ್ನು

ಇರಿಸಿದಳು. ಕೊರಳಿಗೆ ಮುತ್ತಿನ ಹಾರವನ್ನು ಹಾಕಿದಳು. ಶಿಶುವನ್ನೆತ್ತಿ ಹೊನ್ನ ಹರಿವಾಣದಲ್ಲಿ ಮಲಗಿಸಿದಳು. ನವಿರಾದ ಪಟ್ಟೆಯರಿವೆಯನ್ನು ಕೂಸಿಗೆ ಹೊದೆಸಿದಳು.

"ರಾಣಿ, ನೀನೇನೂ ಅಂಜ ಬೇಡ. ಶಿಶುವಿಗೆ ಯಾವ ಕೇಡೂ ಆಗದು." ಎಂದು ಹೇಳಿ ನಂಜಮ್ಮ ಹೊನ್ನ ತಳಿಗೆಯನ್ನು ಎತ್ತಿಕೊಂಡು ಸೆರೆಮನೆಯಿಂದ ಹೊರಳಿದಳು.

ನಂಜಮ್ಮ ಪಹರೆಯುವರನ್ನು ವಿಚಾರಿಸಿದಾಗ ಅರಸನು ಮಂತಣದ ಸಾಲೆಯಲ್ಲಿ ಇರುವನೆಂಬುದು ತಿಳಿಯಿತು. ಅವಳು ಮಂತ್ರಾಲೋಚನೆಯ ಮಂದಿರದ ಕಡೆಗೆ ನೇರಾಗಿ ಬಂದಳು. ಬಾಗಿಲಲ್ಲಿ ಬಿಚ್ಚುಗತ್ತಿಯ ಪಹರೆ ಯುವರು ನಿಂತಿದ್ದರು. ಅವರು ಅರಸನು ನೀಲಣ್ಣನೊಡನೆ ರಾಜ್ಯಕಾರ್ಯ ವನ್ನು ಪರ್ಯಾಲೋಚಿಸುತ್ತಿರುವನೆಂದು ನಂಜಮ್ಮನಿಗೆ ಅರುಹಿದರು. ಒಳಗೆ ಪ್ರವೇಶಿಸಲು ಅಪ್ಪಣೆಯಿಲ್ಲವೆಂದು ಅವರು ತಿಳಿಸಿದರು. ಆದರೆ ಅವಳು ಪಹರೆ ಯುವರ ನುಡಿಗೆ ಕಿವಿಗೊಡದೆ ಬಿರುಗಾಳಿಯಂತೆ ಮಂತಣದ ಮಂದಿರದೊಳಗೆ ನುಗ್ಗಿದಳು.

ಬಾಗಿಲಲ್ಲಿ ಇದ್ದ ಬಿಚ್ಚುಗತ್ತಿಯ ಪಹರೆಯುವರನ್ನು ಲಕ್ಷ್ಯಕ್ಕೆ ತಾರದೆ ಒಳಗೆ ನುಗ್ಗಿದ ನಂಜಮ್ಮನನ್ನು ಕಂಡು ಸಾಂತಣ್ಣ ಆಶ್ಚರ್ಯತಾಳಿದ. ತಾನು ಯಾವ ಗೊಂದಲದಲ್ಲಿ ಸಿಕ್ಕಿ ಬೀಳುವೆನೋ ಎಂಬ ದಿಗಿಲಿನಿಂದ ನೀಲಣ್ಣ ಮಡದಿಯನ್ನು ನೋಡದವನಂತೆ ಮೊಗ ತಗ್ಗಿಸಿದ.

"ನೀಲಣ್ಣ, ನಿನ್ನ ಮಡದಿ ಇಲ್ಲಿಗೇಕೆ ಬಂದಿರುವಳು?" ಎಂದು ದೊರೆ ತನ್ನ ಸೇನಾನಿಯನ್ನು ಪ್ರಶ್ನಿಸಿದ.

ನೀಲಣ್ಣ ಏನು ಮಾರ್ನುಡಿಯಬೇಕೆಂಬುದನ್ನು ತಿಳಿಯದೆ ಹೆಂಡ ತಿಯ ಮುಖವನ್ನು ನೋಡಿದ. ನಂಜಮ್ಮ "ಒಡೆಯರೇ, ನಾನು ಬಂದು ದೇಕೆ ಎಂಬುದು ಅವರಿಗೆ ತಿಳಿಯದು. ಪ್ರಭುಗಳ ಸನ್ನಿಧಿಯಲ್ಲಿ ಅರಿಕೆ ಮಾಡಲು ನಾನು ಬಂದಿದ್ದೇನೆ." ಎಂದು ನಿವೇದಿಸಿದಳು.

"ನೀನು ಏನು ಹೇಳಬೇಕೆಂದಿರುವೆಯೋ ಅದನ್ನು ಹೇಳಿ ಮುಗಿಸು. ನನಗೆ ಬೇರೆ ಕೆಲಸವಿದೆ." ಬೇಸರದ ಸ್ವರದಲ್ಲಿ ಅರಸನು ಹೇಳಿದನು.

"ಪ್ರಭೂ, ತಾವು ದಯಾರ್ದ್ರಹೃದಯರಾಗಬೇಕು." ಹೊಂದಳಿಗೆಯನ್ನು ಅರಸನ ಪಾದಗಳ ಬುಡದಲ್ಲಿರಿಸಿ, ಅವನ ಅಡಿಗಳಿಗೆ ನಂಜಮ್ಮ ಮಣಿದಳು.

ರಾಣಿ ಶಿಶುವನ್ನು ಹೆತ್ತು ಬೇನೆಯಲ್ಲಿ ಮಲಗಿರುವರು. ಅವರಿಗೆ ಸಮಾಧಾನದ ನುಡಿಗಳನ್ನು ಆಡುವವರಿಲ್ಲ. ಹೆಣ್ಣಿಗೆ ಈ ಸಂಸಾರವೆಂಬ ಕಡಲಿನಲ್ಲಿ ಪತಿಯ ಪ್ರೇಮಮಯ ಹಸ್ತವೇ ಆಧಾರ. ಆ ಪ್ರೇಮವಿಲ್ಲದಿದ್ದರೆ ಹೆಣ್ಣಿನ ಬಾಳುವೆ ನುಚ್ಚುನುರಿಯಾಗುವುದು. ರಾಣಿಯವರು ನಿಷ್ಪಾಪರು!"

"ರಾಣಿ ಪಾಪಿ ಹೌದೇ ಅಲ್ಲವೇ ಎಂದು ನಿರ್ಣಯಿಸುವ ಅಧಿಕಾರ ನನ್ನದು. ಆ ವಿಷಯದಲ್ಲಿ ನಿನ್ನ ಸಲಹೆ ನನಗೆ ಬೇಕಾಗಿಲ್ಲ." ಸಾಂತಣ್ಣನ ತುಟಿಗಳಿಂದ ಗಡಸು ಮಾತುಗಳು ಉದುರಿದುವು. ಅವನ ದೃಷ್ಟಿ ನೀಲಣ್ಣನ ಕಡೆ ಹೊರಳಿತು. "ನೀಲಣ್ಣ, ನಿನ್ನ ಹೆಣ್ಣನ್ನು ಆಚೆ ಕಳುಹಿಸು."

"ನಂಜು, ಇಲ್ಲಿ ನಿನಗೇನು ಕೆಲಸ? ಅರಸರು ಕೋಪಗೊಂಡಿದ್ದಾರೆ. ನೀನೊಮ್ಮೆ ಆಚೆ ಹೋಗು." ಹೆದರಿದ ನೀಲಣ್ಣ ಮಡದಿಯನ್ನು ಹೊರಗೆ ಕಳುಹಲು ಪ್ರಯತ್ನಿಸಿದ.

"ಅರಸರು ಕೋಪಗೊಂಡಿದ್ದರೆ, ನಾನೇಕೆ ಹೆದರಬೇಕು?" ನಂಜಮ್ಮ ಪತಿಯ ಮೊಗದತ್ತ ಬಿರುನೋಟವನ್ನು ಎಸೆದಳು: "ಅವರಿಂದ ಉಂಬಳಿ ಜಹಗೀರುಗಳನ್ನು ಪಡೆದವರು ನೀವು. ನಾನು ಹೆದರ ಬೇಕಾದುದೇನೂ ಇಲ್ಲ. ಅವರು ನನ್ನನ್ನು ಸೆರೆಮನೆಗೆ ದೂಡಲಿ. ನಾನು ರಾಣಿಯ ಜತೆಗಾರ್ತಿ ಯಾಗುವೆನು."

"ಒಡೆಯರೇ, ರಾಣಿ ಹೆಣ್ಣು ಕೂಸನ್ನು ಹಡೆದು ಒಂದು ತಿಂಗಳಾ ಯಿತು. ತಾವೀವರೆಗೆ ಆ ಮುದ್ದು ಮಗುವಿನ ಮೋರೆಯನ್ನು ನೋಡಲಿಲ್ಲ. ಮಗುವನ್ನು ತೊಡೆಯ ಮೇಲಿರಿಸಿಕೊಂಡು ಹರಸಲಿಲ್ಲ. ಆ ಮಗುವನ್ನೊಮ್ಮೆ ನೋಡಿರಿ. ಶಿಶುವಿನ ನಿಷ್ಕಲಂಕ ಮುಖವನ್ನು ನೋಡಿಯಾದರೂ ತಾಯಿಯ ಮೇಲೆ ತಾವು ತಾಳಿರುವ ಕೋಪವನ್ನು ತೊರೆಯಿರಿ."

ಎಂದು ನುಡಿದು ನಂಜಮ್ಮ ಹೊಂದಳಿಗೆಯನ್ನು ಆವರಿಸಿದ್ದ ಮುಸು ಕನ್ನು ತೆಗೆದಳು. ಹೊಂದಳಿಗೆಯಲ್ಲಿ ಪಚ್ಚೆಯರಿವೆಯ ಹಾಸಿನಲ್ಲಿ ಎಳೆ ಗೂಸು ಬಾಯಿಯಲ್ಲಿ ಬೆರಳನ್ನು ಇರಿಸಿ ನಿದ್ರಿಸುತಿದ್ದಿತು. ಅದರ ತುಟಿಗಳಿಂದ ಅಕುಟಿಲತೆಯ ಸಿಹಿಹಾಲು ಒಸರುತಿದ್ದಿತು.

"ಪ್ರಭುಗಳೇ, — ನಿಮ್ಮ ಜೀವದ ಪಡಿಯಚ್ಚನ್ನು ತಂದಿದ್ದೇನೆ." ನಂಜಮ್ಮ ದೊರೆಗೆ ಅರಿಕೆ ಮಾಡಿದಳು: "ಮಗುವಿನ ನಿಷ್ಕಲಂಕತೆಯನ್ನು ಕಂಡು ಹಿಂದಿನದನ್ನೆಲ್ಲಾ ಮರೆಯಿರಿ."

"ಅದು ನನ್ನ ಕೂಸಲ್ಲ." ಸಾಂತಣ್ಣ ಅರೆಕ್ಷಣ ಶಿಶುವನ್ನು ನಿಟ್ಟಿಸಿ ಹೇಳಿದ: "ಪಾಪಿಯ ಉದರದಿಂದ ಬಂದುದು ಪಾಪದ ಮೂಟೆಯೇ ಸರಿ."

"ಇನ್ನೂ ಜನರ ಎದೆಗಳಿಂದ ಹೊಮ್ಮಿದ ಕೊಳೆಗಾಳಿ ಸೋಂಕದ ಈ ಹಸುಗೂಸು ಪಾಪದ ಮೂಟೆಯೇ?" ನಂಜಮ್ಮ ಅರಸನ ನುಡಿಗೆ ಅಳುಕದೆ ಮಾತು ಮುಂದುವರಿಸಿದಳು: "ಈ ಶಿಶುವಿನ ಹಣೆಯನ್ನು ನೋಡಿ; ಆ ಕಿರುಹುಬ್ಬನ್ನು ನೋಡಿ; ಕಿವಿಗಳನ್ನು ನೋಡಿ; ಅರೆದೆರೆದ ತುಟಿಗಳನ್ನು ನೋಡಿ; ಶಿಶು ತಮ್ಮನ್ನೇ ಹೋಲುವುದು. ಶಿಶುವನ್ನು ಪಾಪದ ಮೂಟೆ ಯೆಂದರೆ ಕೂಸಿನ ತಂದೆಯನ್ನೂ ಪಾಪದ ಮೂಟೆಯೆಂದು ಕರೆಯಬೇಕಾ ಗುವುದು!"

"ನಂಜು, ರಾಜ ಸನ್ನಿಧಿಯಲ್ಲಿ ನಿಂದೆ ಸಲ್ಲದು." ನೀಲಣ್ಣ ಮಡದಿಯ ವಾಕ್ಪ್ರವಾಹವನ್ನು ತಡೆಯಲು ಹವಣಿಸಿದ.

"ನೀವು ಸುಮ್ಮನಿರಿ! ಅರಸನಿಗೆ ಹೆದರಬೇಕಾದುದು, ಬಾಗಿ ನಡೆಯ ಬೇಕಾದುದು ಸಹಜ. ದೊರೆಯೇ ರಾಕ್ಷಸನಾದಾಗ ಏಕೆ ಬಾಗಬೇಕು?

"ಎಲೈ ಹೆಂಗಸೇ, ನಿನ್ನ ನಾಲಗೆ ಬಹು ಉದ್ದವಾಯಿತು. ನೋಡು, ನಿನ್ನನ್ನು ಶೂಲಕ್ಕೇರಿಸುವೆನು."

"ಒಡೆಯರೇ, ಬೆನ್ನಹಿಂದೆ ನೆರಳಿನಂತೆ ಬರುತಿದ್ದ ರಾಣಿಯನ್ನು ಸೆರೆ ಮನೆಗೆ ಕಳುಹಿಸಿ ಪುಣ್ಯಕಟ್ಟಿಕೊಂಡಿರಿ. ಇನ್ನು ಹೆಣ್ಣನ್ನು ಶೂಲಕ್ಕೇರಿಸಿ ಕೀರ್ತಿಯನ್ನು ಕಟ್ಟಿಕೊಳ್ಳಿರಿ! ಕೈಹಿಡಿದ ಮಡದಿಯರನ್ನು ಅಪಮಾನ ಸಂಕಟ ಗಳ ಅಗ್ನಿಕುಂಡದಲ್ಲಿ ದೂಡದ ಎಲ್ಲಾ ಸರದಾರರನ್ನೂ ಶೂಲಕ್ಕೇರಿಸಿರಿ!"

"ಬಾಯಿಗೆ ಬಂದಂತೆ ಗಳುಹದಿರು. ನೀಲಣ್ಣ, ನಿನ್ನ ಮಡದಿಯನ್ನು ಹೊರದೂಡು." ಅರಸ ಆಜ್ಞಾಪಿಸಿದ: "ಆದರೆ ಹೆಂಡತಿಗೆ ಹೆದರಿ ನಡುಗು ತ್ತಿರುವ ಅಂಜುಬುರುಕ ನೀನು. ಆದುದರಿಂದಲೇ ಅವಳು ನೆತ್ತಿಯನ್ನೇರಿ ನಿನ್ನನ್ನು ಆಳುತ್ತಿರುವಳು."

ನೀಲಣ್ಣ ಅರಸನಿಗೆ ಮಾರ್ನುಡಿಯಲು ಧೈರ್ಯಪಡಲಿಲ್ಲ. ನಂಜಮ್ಮ "ಪ್ರಭೂ, ನಾಡನ್ನು ಅರಸಾಳಬೇಕು. ಮನೆಯನ್ನು ಮಡದಿಯಾಳಬೇಕು. ಅದನ್ನು ತಾವು ಅರಿಯದಿರುವುದರಿಂದಲೇ ಇಷ್ಟೆಲ್ಲ ಅನರ್ಥವಾಯಿತು!" ಎಂದು ನುಡಿದಳು.

"ನೀನು ಇಲ್ಲಿಂದ ತೊಲಗು!" ಅರಸು ಕೋಪದಿಂದ ಗದರಿಸಿದ.

"ತೊಲಗುವೆನು ಒಡೆಯರೇ, ದೇಗುಲದಲ್ಲಿ ನಾಡದೇವನ ಸನ್ನಿಧಿಯಲ್ಲಿ ವರವನ್ನು ಬೇಡೋಣವೆಂದು ಬಂದೆ. ದಯಾಭರಿತನಾದ ದೇವನಿಲ್ಲಿರುವನೆಂದು ನಂಬಿದೆ. ತಪ್ಪುಗಳನ್ನು ಮನ್ನಿಸಿ ನೊಂದ ಜೀವವನ್ನು ಸೊಗದ ಚೆಲುನಾಡಿಗೊಯ್ಯುವ ದೊಡ್ಡಮನಸ್ಸಿನ ದೇವನನ್ನು ಕಾಣಲು ಬಯಸಿ ಬಂದೆ. ಆದರೆ ಗುಡಿಯೊಳಗಿರುವುದು ದೇವನಲ್ಲ! ಕಲ್ಲೆದೆಯ ರಕ್ಕಸ! ತನ್ನ ಭಕ್ತರನ್ನೇ ಕೈಚಾಚಿ ಕಬಳಿಸುತ್ತಿರುವ ಕೂಳ ರಕ್ಕಸ!"

ಎಂದು ನುಡಿದು ಸಂಜಮ್ಮ ಮಂದಿರದಿಂದ ಹೊರತೆರಳಲು ಹಿನ್ನಡಿ ಇರಿಸಿದಳು.

"ನಿನ್ನೊಡನೆ ಈ ಕುನ್ನಿಯುನ್ನೂ ತೆಗೆದುಕೊಂಡು ಹೋಗು" ರಾಜ ಆಣತಿಯನ್ನು ನೀಡಿದ.

"ನಾನೇಕೆ ಶಿಶುವನ್ನು ಒಯ್ಯಲಿ? ಕೂಸನ್ನು ತಂದೆಯ ಸನ್ನಿಧಿಯಲ್ಲಿ ಒಪ್ಪಿಸಿದ್ದೇವೆ. ಅದನ್ನು ಕಾಯುವ ಅಥವಾ ಕೊಲ್ಲುವ ಹೊಣೆ ತಮ್ಮದು"

ಎಂದು ನುಡಿದ ನಂಜಮ್ಮ ಅಲ್ಲಿ ನಿಲ್ಲದೆ ಮಂತಣದ ಸಾಲೆಯಿಂದ ಹೊರ ತೆರಳಿದಳು. ಶಿಶುವಿನ ನಿಷ್ಕಳಂಕ ಮುಖ ಅರಸನ ಎದೆಯಲ್ಲಿ ಮಮತೆಯ ನೆಲೆಯನ್ನು ಉಕ್ಕಿಸಬಹುದು; ತನ್ನ ನಾಡಿಗಳಲ್ಲಿ ಹರಿವ ರಕ್ತವೇ ಕೂಸಿನ ನಾಡಿಗಳಲ್ಲಿಯೂ ಹರಿಯುತ್ತಿರುವುದರಿಂದ, ಆ ಮಗುವಿಗೋಸುಗ ಅರಸನು ರಾಣಿಗೆ ಕರುಣೆದೋರಬಹುದು; ಮುನಿಸಿನ ಕಿಚ್ಚು ಆರಿ ಶಾಂತನಾದಾಗ ಆತ ಮಗುವನ್ನೆತ್ತಿ ಮುದ್ದಿಸಬಹುದು; ಹೀಗೆ ಅವಳು 'ಬಹುದುಗಳ' ರಕ್ಷಣೆಗೆ ಮಗುವನ್ನು ಕೊಟ್ಟು ರಾಣಿಯನ್ನು ಕಾಣಲು ಸೆರೆಮನೆಗೆ ತೆರಳಿದಳು.

ಸಾಂತಣ್ಣ ಮಗುವಿನತ್ತ ಕಣ್ಣುಗಳನ್ನು ಹೊರಳಿಸಿದ. ಕೂಸು ನಿದ್ರೆಯಿಂದ ಎಚ್ಚತ್ತು ತನ್ನ ಕಣ್ಣುಗಳ ತಿಳಿನೋಟವನ್ನು ತಂದೆಯ ಕಡೆಗೆ ಹೊರಳಿಸಿತು. ಆ ನೋಟದಲ್ಲಿ ಅಡಗಿದ ಕೋಮಲ ಭಾವ – ಅಕುಟಿಲತೆಗಳು ಅರಸನ ಹೃದಯವನ್ನು ಸ್ಪರ್ಶಿಸಲಿಲ್ಲ; ಅವನ ಹೃದಯದಲ್ಲಿ ಮಮತೆಯ ಊಟೆಯನ್ನು ಚಿಮ್ಮಿಸಲಿಲ್ಲ. ಈ ಶಿಶುವನ್ನು ಏನು ಮಾಡುವುದು ಎಂದು ಅವನ ಬುದ್ಧಿ ಆಲೋಚಿಸತೊಡಗಿತು.

"ಆ ಪಾಪಿಯ ಬಸಿರಲ್ಲಿ ಬಂದ ಈ ಕೀಟವನ್ನು ಪೂರ್ವದಲ್ಲಿ ಕಂಸನು ದೇವಕಿಯ ಶಿಶುವನ್ನು ಬಂಡೆಯ ಮೇಲೆ ಅಪ್ಪಳಿಸಿದಂತೆ, ಅಪ್ಪಳಿಸಬೇಕು ಎಂದೆನಿಸುತ್ತದೆ" ಅರಸನ ಕೊರಳಿಂದ ನಿಷ್ಕರುಣೆಯ ವಾಣಿ ಹೊರಟಿತು:

"ಆದರೆ ಜನರು ಮಗಳನ್ನು ಕೊಂದ ಮಹಾರಾಯನೆಂದು ನನ್ನ ಕುರಿತು ಆಡಿ ಕೊಳ್ಳುವರು"

ಅರಸನ ನುಡಿಯನ್ನು ಕೇಳಿ ನೀಲಣ್ಣನ ಮೈಯೆಲ್ಲ ನಡುಗಿತು. ಏನನ್ನೂ ಅರಿಯದ ಶಿಶುವನ್ನು ಕೊಲೆಗೈಯುವುದು ಎಂಬ ಆಲೋಚನೆ ಅವನ ಮೈ ನವಿರೇಳಿಸಿತು.

"ನಿನ್ನ ಬಾಯ್ಬಡುಕಿ ಕೂಸನ್ನು ಇಲ್ಲಿಯೇ ಬಿಟ್ಟು ಹೋದಳು. ಏನು ಮಾಡುವುದು?" ಎಂದು ದೊರೆ ಆಲೋಚನಾ ಪರವಶನಾದ.

"ಮಕ್ಕಳಿಲ್ಲದ ತಾಯಿತಂದೆಗಳಿಗೆ ಶಿಶುವನ್ನು ಸಾಕಲು ಕೊಡಬಹುದು." ಎಂದು ನೀಲಣ್ಣ ಉಪಾಯವನ್ನು ಸೂಚಿಸಿದ.

"ಅನಂತರ ಈ ಕೂಸಿನ ತಂದೆ ಊರ ದೊರೆಯೆಂದು ಜನವೆಲ್ಲ ನನ್ನ ಕಡೆ ಬೆರಳುಮಾಡಿ ತೋರಿಸುವರು. ಆಗದು, ಈ ಮಗು ನಾಡಿನಲ್ಲಿಯೇ ಇರಕೂಡದು."

ಅರಸ ತಲೆಯನ್ನು ಬಾಗಿಸಿ ಒಂದು ಕ್ಷಣ ಆಲೋಚಿಸಿದ. ಆ ಮೇಲೆ ಅವನು ನೀಲಣ್ಣನ ಕಡೆ ಮೊಗದಿರುಹಿ, "ನೀನೇ ನನಗೆ ಅತಿ ನಂಬಿಕೆಯವ. ಆದುದರಿಂದ ನೀನು ಒಂದು ಕೆಲಸಮಾಡಬೇಕು." ಎಂದು ನುಡಿದ.

"ಅಪ್ಪಣೆ. ಸಿದ್ಧನಿದ್ದೇನೆ."

"ನೋಡು ನೀನು ಒಂದು ನೌಕೆಯನ್ನು ಸಿದ್ಧಗೊಳಿಸು. ಮೈಗಾವಲಿಗೆಂದು ನಾಲ್ಕಾರು ಮಂದಿ ಭಟರನ್ನು ಕರೆದುಕೋ. ಈ ಶಿಶುವನ್ನು ನಾವೆಯಲ್ಲಿ ತೆಗೆದುಕೊಂಡು ಹೋಗಿ, ನನ್ನ ನಾಡಿನ ಗಡಿಯಾಚೆ ಬಹುದೂರದಲ್ಲಿ, ನಿರ್ಜನವಾದ ಒಂದು ಪ್ರದೇಶದಲ್ಲಿ ಮಗುವನ್ನು ತೊರೆದು ಬಂದುಬಿಡು."

ರಾಜಾಜ್ಞೆ ಬಹು ಕ್ರೂರವಾದುದು. ಆದರೆ ಅದಕ್ಕೆ ಪ್ರತಿ ಹೇಳುವ ಎದೆಗಾರಿಕೆ ನೀಲಣ್ಣನಿಗಿಲ್ಲ. ಅವನು "ಹಸಾದ"ವೆಂದು ರಾಜಾಜ್ಞೆಯನ್ನು ನೆತ್ತಿಯಲ್ಲಿ ಹೊತ್ತುಕೊಂಡ.

ವೀರಣ್ಣನ ವಿವೇಚನಾ ಶಕ್ತಿಯಾಗಲೀ, ಧಾರ್ಮಿಕ ಬುದ್ಧಿಯಾಗಲೀ ನೀಲಣ್ಣನಿಗಿರಲಿಲ್ಲ. ಆದುದರಿಂದ ದೊರೆಯ ಆಜ್ಞೆ ಎಷ್ಟೇ ಅಪ್ರಿಯವಾಗಿದ್ದರೂ ಅದನ್ನು ಈಡೇರಿಸುವುದು ತನ್ನ ಕರ್ತವ್ಯವೆಂದು ಅವನು ಬಗೆದ . . . ಅವನು ರೇವಿಗೆ ಹೋಗಿ ನೌಕೆಯೊಂದನ್ನು ಸಿದ್ಧಪಡಿಸಿದ. ರಕ್ಷಣೆಗೆಂದು ನಾಲ್ಕುಮಂದಿ ಭಟರನ್ನು ಜತೆಯಲ್ಲಿ ಕರದುಕೊಂಡ. ಶಿಶುವಿರುವ ಹೊಂದೊಟ್ಟಿಗೆಯನ್ನು ಎತ್ತಿಕೊಂಡು ದೂರದ ಊರಿಗೆ ಪ್ರಯಾಣವನ್ನು ಕೈಗೊಂಡ.

## ಒಂಬತ್ತು

ದೈವದ ಅರುಳನ್ನು ಕೇಳಲೆಂದು ಕೊಲ್ಲೂರಿಗೆ ತೆರಳಿದ ದುಗ್ಗಪ್ಪ ಸಂಕಣ್ಣರು ಹೊನ್ನಹಳ್ಳಿಗೆ ಇನ್ನೂ ಮರಳಿ ಬರಲಿಲ್ಲ. ದೈವವಾಣಿಯೇನೆಂಬುದನ್ನು ಅರಿತ ಮೇಲೆ ರಾಣಿಯ ವಿಚಾರಣೆ ನಡೆಸುವೆನೆಂದು ಸಾಂತಣ್ಣ ಸರದಾರರಿಗೆ ಮಾತುಕೊಟ್ಟಿದ್ದ. ಆದರೆ ರಾಣಿ ಶಿಶುವನ್ನು ಹೆತ್ತುದು; ನಂಜಮ್ಮ ಕೂಸನ್ನು ರಾಜಸನ್ನಿಧಿಯಲ್ಲಿ ಬಿಟ್ಟುಹೋದುದು; ಇವು ಅರಸನ ಕೋಪಾಗ್ನಿಯನ್ನು ಪರಿತಪ್ತಗೊಳಿಸಲಿರುವ ಆಜ್ಯಾಹುತಿಗಳಾದುವು. ರಾಣಿ ಅಪರಾಧಿಯೆಂಬುದರಲ್ಲಿ ಅವನಿಗೆ ಸಂದೇಹವೇ ಇರಲಿಲ್ಲ. ರಾಣಿಯನ್ನು ವಿಚಾರಣೆಗೊಳಪಡಿಸಿ ಅವಳ ಅಪರಾಧವನ್ನು ಸ್ಥಾಪಿಸಿ ದಂಡಿಸಬೇಕೆಂಬ ತೀವ್ರವಾದ ಪ್ರತೀಕಾರ ಬುದ್ಧಿ ಅವನಲ್ಲಿ ಅಂಕುರಿಸಿತು. ಆದುದರಿಂದ ಅವನು ದುಗ್ಗಪ್ಪ ಸಂಕಣ್ಣರ ಆಗಮನವನ್ನು ಕಾಯಲಿಲ್ಲ. ಅವನು ನ್ಯಾಯಾಲಯದಲ್ಲಿ ರಾಣಿಯ ವಿಚಾರಣೆ ನಡೆಯಬೇಕೆಂದು ಆಜ್ಞಾಪಿಸಿದ.

ನ್ಯಾಯ ಮಂದಿರದಲ್ಲಿ ಮುಖ್ಯ ಧರ್ಮಾಧಿಕಾರಿ ಅರಸನೇ ಆಗಿದ್ದ. ಅವನ ಸಹಾಯಕ್ಕೆ ಇನ್ನಿಬ್ಬರು ಧರ್ಮಾಧಿಕಾರಿಗಳಿದ್ದರೂ ಅವರಲ್ಲಿ ಒಬ್ಬರು ಆಸ್ಥಾನದ ಗುರುಗಳೂ ವಿದ್ವಾಂಸರೂ ಆದ ವಾಮನ ಶಾಸ್ತ್ರಿಗಳು. ಇನ್ನೊಬ್ಬರು ಹೊನ್ನಹಳ್ಳಿಯ ಪ್ರಮುಖ ಬಣಜಿಗ ವೆಂಕಪ್ಪ ಸೆಟ್ಟರು. ಧರ್ಮಾಧಿಕಾರಿಗಳ ಅಪ್ಪಣೆಯಂತೆ ರಾಣಿಯನ್ನು ಭಟರು ರಾಜಾಸ್ಥಾನಕ್ಕೆ ತಂದರು. ರಾಣಿಯ ವಿಚಾರಣೆಯೆಂದು ಸುದ್ದಿಯು ಹರಡಿದುದರಿಂದ, ವಿಚಾರಣೆಯನ್ನು ನೋಡಲು ಪುರಜನರೆಲ್ಲರೂ ಬಂದು ಸೇರಿದ್ದರು.

ರಾಣಿಯ ಬೆನ್ನ ಹಿಂದೆ ಅವಳ ಇಬ್ಬರು ದಾಸಿಯರೂ, ನಂಜಮ್ಮನೂ ಇದ್ದರು. ಎರಡು ತಿಂಗಳ ಕಾಲಾವಧಿಯಲ್ಲಿ ಅನುಭವಿಸಿದ ದಾರುಣ ವ್ಯಥೆಯು ರಾಣಿಯ ಮುಖದ ಕಾಂತಿಯನ್ನು ಕುಂದಿಸಿತ್ತು. ಆಕೆಯ ದೇಹ ಬಳಲಿ ಕೃಶವಾಗಿತ್ತು. ಅವಳ ಕಣ್ಣುಗಳು ಶೋಕದ ಮಡುಗಳಂತೆ ತೋರುತಿದ್ದುವು. ಅವಳ ಇರವನ್ನು ಕಂಡು ಜನರು ಕರುಣೆ ತಾಳಿದರು. ಅವರು "ಎಂತಹ ಒಳ್ಳೆಯ ಜೀವಕ್ಕೆ ಎಂತಹ ಸಂಕಟವನ್ನು ದೇವರು ಕೊಟ್ಟನು! ಎಂದು ಪಿಸು ಮಾತಿನಲ್ಲಿ ಉದ್ಗಾರವೆತ್ತಿದರು. ಸಾಂತಣ್ಣನ ದೃಷ್ಟಿಯಲ್ಲಿ ರಾಣಿಗೆ ಮರುಕ ತೋರುವುದೂ ರಾಜದ್ರೋಹವಾಗಿದ್ದಿತು.

ಧರ್ಮಾಧಿಕಾರಿಗಳು ಧರ್ಮಾಸನಗಳ ಮೇಲೆ ಮಂಡಿಸಿದರು. ವಿಚಾರಣೆಗೆ ಆರಂಭವಾಯಿತು. ನ್ಯಾಯಾಲಯದ ಕರಣಿಕನು, "ಹೊನ್ನಹಳ್ಳಿಯ ಮಹಾ ಮಾಂಡಲಿಕ ಪ್ರಭು ಸಾಂತಣ್ಣ ಒಡೆಯರ ಪತ್ನಿಯಾದ ರೇವಕ್ಕನೆಂಬ ನೀನು ಗಂಗವಳ್ಳಿಯ ಅರಸು ಹನುಮಣ್ಣನನ್ನು ಕಾಮಿಸಿ ಸತೀಧರ್ಮವನ್ನು ಉಲ್ಲಂಘಿಸಿದುದಲ್ಲದೆ, ರಾಜವಧೆಗೆ ಹೂಡಿದ ಒಳಸಂಚಿನಲ್ಲಿ ನೀನು ಹನುಮಣ್ಣನಿಗೂ ವೀರಣ್ಣನಿಗೂ ಸಹಾಯಕಳಾದೆ. ಅಲ್ಲದೆ ನೀನು ಆ ದ್ರೋಹಿಗಳಿಬ್ಬರೂ ಗಂಗವಳ್ಳಿಗೆ ಪಲಾಯನ ಮಾಡಲು ನೆರವಾದೆ. ಈ ಕಾರಣಗಳಿಂದ ಹೊನ್ನಹಳ್ಳಿಯ ಪ್ರಜೆಯಾದ ನೀನು ಪತಿದ್ರೋಹಿಯೂ, ರಾಜದ್ರೋಹಿಯೂ ಆಗಿರುವೆ." ಎಂದು ರಾಣಿಯ ಮೇಲೆ ಹೊರಿಸಿದ ಆರೋಪವನ್ನು ಓದಿದ.

"ಎಲೈ ಆರೋಪಿಯೇ, ನಿನ್ನ ಮೇಲೆ ಹೊರಿಸಿದ ಅಪರಾಧಗಳನ್ನು ತಿಳಿದೆಯಲ್ಲ." ಧರ್ಮಾಧಿಕಾರಿಯ ಪೀಠವೇರಿದ ಸಾಂತಣ್ಣ ನುಡಿದ. "ಈ ವಿಷಯದಲ್ಲಿ ನೀನು ಏನು ಹೇಳುವೆ?"

"ಧರ್ಮಾಧಿಕಾರಿಗಳು ನನ್ನ ಮೇಲೆ ಹೊರಿಸಿದ ಅಪರಾಧಗಳನ್ನು ಅಲ್ಲಗಳೆಯಬೇಕಾಗುವುದು." ರಾಣಿ ತಲೆಯನ್ನು ಬಾಗಿಸಿ ಹೇಳಿದಳು: ಕಣ್ಣುಗಳಲ್ಲಿ ನೀರು ತುಂಬಿದುದರಿಂದ ಅವಳ ದೃಷ್ಟಿ ಮಂಜಾಗಿತ್ತು. ಆದರೆ ಅವಳ ಧ್ವನಿ ಗಂಭೀರವಾಗಿತ್ತು. ನುಡಿಯಲ್ಲಿ ಸ್ಥಿರತೆಯಿತ್ತು. "ನಾನು ನಿರಪರಾಧಿಯೆಂದು ಹೇಳಿದರೆ ನಂಬುವವರು ಯಾರು? ನನ್ನ ನುಡಿ ಅರಣ್ಯ ರೋದನವಾಗುವುದು. ನನ್ನ ಬಾಳುವೆಯ ಒಡನಾಡಿಯಾಗಿ, ನನ್ನ ಮನೋಮಂದಿರದ ನಂದಾದೀಪವಾಗಿ, ನನ್ನ ಪ್ರೇಮಜಲದ ಅಭಿಷೇಚನ ಮೂರ್ತಿಯಾಗಿ ಬೆಳಗುತಿದ್ದವರೇ, ನನ್ನ ಮೇಲೆ ಅಪರಾಧವನ್ನು ಹೊರಿಸಿರುವಾಗ, ನನ್ನ ನಿರಪರಾಧಿತ್ವವನ್ನು ಸ್ಥಾಪಿಸಲು ಸಾಕ್ಷಿಗಳನ್ನು ಎಲ್ಲಿಂದ ತರಲಿ? ನಾನು ನಿರಪರಾಧಿಯೆಂಬುದನ್ನು ಅಂತರಂಗ ಬಲ್ಲುದು; ಸರ್ವಾಂತರ್ಯಾಮಿಯಾದ ಪರಮಾತ್ಮನು ಬಲ್ಲ. ಹಗಲಿರುಳು ಜಗತ್ತಿಗೆ ಬೆಳಕನ್ನು ನೀಡುವ ಸೂರ್ಯ ಚಂದ್ರರು ಬಲ್ಲರು. ಸರ್ವಜೀವಿಗಳಿಗೂ ಪ್ರಾಣವನ್ನೊದಗಿಸುವ ಮಾರುತನು ಬಲ್ಲನು. ನಮ್ಮೆಲ್ಲರನ್ನೂ ಹೊತ್ತು ಸಲಹುತ್ತಿರುವ ಭೂಮಿತಾಯಿ ಬಲ್ಲಳು. ದೈವವು ನನ್ನ ಬಾಳುವೆಯನ್ನು ತನ್ನ ಆಟಿಕೆಯನ್ನಾಗಿ ಮಾಡಿಕೊಂಡಿದೆ. ಚಾಲುಕ್ಯ ವಂಶದ ದೊರೆಯ ಮಗಳಾಗಿ, ಹೊನ್ನಹಳ್ಳಿಯ ಪ್ರಭುವಿನ ರಾಣಿಯಾಗಿ, ನಾಳೆ ನಾಡನ್ನಾಳುವ ರಾಜಕುಮಾರನ ಮಾತೆಯಾಗಿ ಗೌರವಿಸಲ್ಪಡುತಿದ್ದ

ನಾನು ಇಂದು ರಾಜದ್ರೋಹಿಯಾಗಿ ಇಲ್ಲಿ ನಿಂತುದು ದೈವವಿಲಾಸವಲ್ಲದೆ ಮತ್ತಿನ್ನೇನು. ಹನುಮಣ್ಣ ದೊರೆ ನಮ್ಮ ನಾಡಿಗೆ ಬರುವ ಮುನ್ನ ನನ್ನ ಅರಸರು ನನ್ನನ್ನು ತನ್ನ ಬಾಳುವೆಯ ಬೆಳದಿಂಗಳೆಂದು ಹೊಗಳುತಿದ್ದರು. ಜೀವನದ ಭಾಗ್ಯದೇವತೆಯೆಂದು ಆರಾಧಿಸುತಿದ್ದರು. ಹೀಗೆ ಆರಾಧನಾ ಪೀಠದಿಂದ ನಾನು ತಳ್ಳಲ್ಪಡಬೇಕಾದರೆ, ಅದು ದೈವದ ಮುನಿಸಲ್ಲದೆ ಮತ್ತಿನ್ನೇನು? ಆದರೂ ಪ್ರಭುಗಳು ತಮ್ಮ ಅಂತರಂಗವನ್ನು ಒಮ್ಮೆ ಪರೀಕ್ಷಿಸಲಿ. ಅವರ ಮನಸ್ಸಾಕ್ಷಿ ನಾನು ಅಪರಾಧಿಯೆಂದು ಹೇಳುವುದೇ?"

"ನೀನು ಹನುಮಣ್ಣನನ್ನು ಕಾಮಿಸಿದೆ." ವ್ಯಗ್ರಚಿತ್ತದಿಂದ ಸಾಂತಣ್ಣ ಹೇಳಿದ.

"ನಾನು ಹನುಮಣ್ಣನನ್ನು ಕಾಮಿಸಿಲ್ಲ; ಪ್ರೀತಿಸಿದೆ." ರಾಣಿಯ ನೋಟದ ಕೂರಂಬು ರಾಜನ ಮೊಗದಲ್ಲಿ ನಟ್ಟಿತು. "ಒಬ್ಬ ತಂಗಿ ಅಣ್ಣನನ್ನು ಪ್ರೀತಿಸುವಂತೆ, ನಮ್ಮ ದೊರೆಗಳ ಸೋದರರಂತಿದ್ದ ಹನುಮಣ್ಣ ಅರಸರನ್ನು ಪ್ರೀತಿಸಿದೆ. ಆ ನಿರ್ವ್ಯಾಜ ಪ್ರೇಮದಲ್ಲಿ ಪಾಪ ಎಳ್ಳನಿತಾದರೂ ಇದ್ದರೆ ಈ ನೆಲದಾಯಿ ನನ್ನನ್ನು ನುಂಗಲಿ. ನಾನು ಹನುಮಣ್ಣ ಒಡೆಯರನ್ನು ಆದರಿಸಿ ಉಪಚರಿಸದಿದ್ದರೆ ದೊರೆಗಳ ಆತ್ಮಮಿತ್ರರಿಗೆ ಅಪಚಾರವೆಸಗಿದಂತಾಗುತಿದ್ದಿತು. ವೀರಣ್ಣ ಪ್ರಾಮಾಣಿಕನಾದ ವ್ಯಕ್ತಿ. ಪ್ರಭುಗಳು ಗಂಗವಳ್ಳಿಯ ದೊರೆಗಳನ್ನು ಕೊಲ್ಲಲು ಮತ್ಸರದಿಂದ ಒಳಸಂಚು ಹೂಡಿದಾಗ, ವೀರಣ್ಣ ದೊರೆಗಳನ್ನು ಅತಿಥಿ ವಧೆಯ ಪಾಪದಿಂದ ರಕ್ಷಿಸಲು ಹನುಮಣ್ಣನನ್ನು ಗಂಗವಳ್ಳಿಗೆ ಕರೆದು ಕೊಂಡು ಹೋಗಿರಬೇಕು."

"ಹೌದು, ನಿನ್ನ ಪಾಪಗಳನ್ನು ಮರೆಸಲು ದೋಷಗಳನ್ನು ನನ್ನ ಮೇಲೆ ಹೊರಿಸು." ಸಾಂತಣ್ಣ ಸಿಡುಕಿನಿಂದ ನುಡಿದ: "ನಿನ್ನ ಪಾಪಕ್ಕೆ ಸಾಕ್ಷಿಯಾದ ನಿನ್ನ ಕೂಸೇ ನೀನು ಅಪರಾಧಿಯೆಂದು ಹೇಳುತ್ತಲಿದೆ. ಶೂಲಕ್ಕೇರಿಸುವುದೇ ನಿನಗೆ ಯೋಗ್ಯ ದಂಡನೆಯಾಗಿದೆ."

"ಪ್ರಭೂ, ನಾನು ಮರಣದಂಡನೆಗೆ ಅಂಜುವೆನೆಂದು ನೀವು ತಿಳಿದು ಕೊಳ್ಳಬಾರದು. ನನ್ನ ಹೃದಯೇಶ್ವರನ ಪ್ರೇಮ ವಿಶ್ವಾಸಗಳನ್ನು ಕಳೆದು ಕೊಂಡೆ, ನನ್ನ ಬಸಿರಲ್ಲಿ ಬಂದ ದೊರೆಮಗನ ದರ್ಶನ ಭಾಗ್ಯ ನನಗಿಲ್ಲದಾ ಯಿತು. ಸೆರೆಮನೆಯಲ್ಲಿ ನನ್ನ ಮಮತೆಗೆ ಆಸರೆಯಾಗಿರಲೆಂದು ಬಂದ ಹಸು ಗೂಸನ್ನು ಕಳೆದುಕೊಂಡು ನಿರ್ಭಾಗ್ಯಳಾದೆ. ಬಿರುಬಂಡೆ ಮಳೆಬಿಸಿಲು ಚಳಿ

ಗಾಳಿಗಳನ್ನು ತಾಳಿಕೊಳ್ಳುವಂತೆ, ನಾನು ಈ ವರೆಗೆ ಅವಮಾನ, ವಿದ್ವೇಷ, ಮತ್ಸರಗಳನ್ನು ಸಹಿಸಿದೆ. ಆದರೆ ನನ್ನ ಸಹನಶಕ್ತಿಗೂ ಒಂದು ಮೇರೆಯಿದೆ. ಬಿಸಿಲು, ಮಳೆಗಾಳಿಗಳ ನಿರಂತರ ಆಘಾತದಿಂದ ಹಾಸರೆಯಾದರೂ ಒಂದು ದಿನ ಬಿರಿಯುವುದು. ದಿನ ನಿತ್ಯ ಅವಮಾನ—ಸಂಕಟಗಳ ಸರಳಮಂಚದಲ್ಲಿ ಪವಡಿಸಿ ಸತ್ತಂತೆ ಬಾಳುವುದರ ಬದಲು, ಈಗಲೇ ಸಾಯುವುದು ಮೇಲು. ಆಗ ಈ ಪ್ರಪಂಚದಲ್ಲಿ ತುಂಬಿದ ಮತ್ಸರ ದ್ವೇಷಗಳೆಂಬ ಕಾಳಸರ್ಪಗಳು ನನ್ನನ್ನು ಬಾಧಿಸವು."

ನ್ಯಾಯಾಲಯದಲ್ಲಿ ಜನರೆಲ್ಲರೂ ರಾಣಿಯ ವಚನಗಳನ್ನು ಕಿವಿಗೊಟ್ಟು ಆಲಿಸಿದರು. ಸಾಂತಣ್ಣನ ಮತ್ತು ಇತರರ ಹೃದಯಗಳನ್ನು ರಾಣಿಯ ನುಡಿಗಳು ಸ್ಪರ್ಶಿಸಿದುವು. ಅವರ ಅಂತರಂಗಗಳನ್ನು ಕರಗಿಸಿದುವು. ಅವರು ರಾಣಿ ಪೂರ್ಣ ನಿರ್ದೋಷಿಯೆಂದು ನಂಬಿದರು.

ಅನಿತರಲ್ಲಿ ಹೊರಗೆ "ದಾರಿ, ದಾರಿ." ಎಂಬ ಗದ್ದಲ ಕೇಸಿತು. ಸಾಂತಣ್ಣ ಜನರ ಸದ್ದನ್ನು ಕೇಳಿ, "ಅದೇನು ಗಲಭೆ?" ಎಂದು ಹುಬ್ಬು ಗಂಟಿಕ್ಕಿಕೊಂಡು ಪ್ರಶ್ನಿಸಿದ.

"ಕೊಲ್ಲೂರಿನಿಂದ ದುಗ್ಗಪ್ಪ ಸಂಕಣ್ಣರು ಬಂದಿರುವರು" ಬಿಚ್ಚುಗತ್ತಿ ಹಿಡಿದ ಪಹರೆಗಾರನು ಬಂದು ಅರಿಕೆ ಮಾಡಿದ.

"ಅವರನ್ನು ಒಳಗೆ ಬರಹೇಳು." ಎಂದು ರಾಜಾಜ್ಞೆಯಾಯಿತು.

ದುಗ್ಗಪ್ಪ ಸಂಕಣ್ಣರು ನ್ಯಾಯಮಂದಿರದೊಳಗೆ ಪ್ರವೇಶಿಸಿ ದೊರೆಯ ಪಾದಗಳಿಗೆ ಮಣಿದರು. ತಾವು ತಂದ ದೈವ ವಾಣಿಯನ್ನು ರಾಜಹಸ್ತಗಳಿಗೆ ಅವರು ಸಮರ್ಪಿಸಿದರು. ಅರಸನು ದೇವಾಲಯದ ಮುದ್ರೆಯಿರುವ ಸಣ್ಣ ಚೀಲವನ್ನು ಕರಣಿಕನ ಕೈಗೆ ನೀಡಿದ; ಚೀಲದ ಮುದ್ರೆಯನ್ನು ಒಡೆದು ದೈವ ವಾಣಿಯನ್ನು ನ್ಯಾಯಸ್ಥಾನದಲ್ಲಿ ಓದಲು ಆಜ್ಞಾಪಿಸಿದ.

ಕರಣಿಕನು ಮುದ್ರೆಯನ್ನು ಒಡೆದು ಚೀಲದೊಳಗಿಂದ ಓಲೆಯನ್ನು ಹೊರತೆಗೆದ. ಅವನು ಓಲೆಯ ಮೇಲಿನ ಬರಹವನ್ನು ಒಮ್ಮೆ ನಿಟ್ಟಿಸಿ ನೋಡಿದ. ಅವನ ಕೈಗಳು ನಡುಗಿದುವು. ಅರಸನು, "ಏಕೆ ಕಂಬದಂತೆ ನಿಂತಿದ್ದೀಯೆ? ದೈವವಾಣಿಯನ್ನು ಪ್ರಜೆಗಳೆಲ್ಲಾ ಕೇಳಲಿ. ಓದು." ಎಂದು ಅಪ್ಪಣೆ ಮಾಡಿದ.

ಕರಣಿಕನು ಹೀಗೆ ದೈವವಾಣಿಯನ್ನು ಓದಿದ:—

"ರಾಣೀರೇವಕ್ಕ ಸೀತೆ ಸಾವಿತ್ರಿಯರಂತೆ ಪತಿವ್ರತೆ. ಹನುಮಣ್ಣ

ಕಲಂಕರಹಿತ ಉದಾತ್ತ ಪುರುಷ. ವೀರಣ್ಣ ಸ್ವಾಮಿನಿಷ್ಠ ರಾಜಭಕ್ತ. ಸಾಂತಣ್ಣ ಮತ್ಸರಗ್ರಸ್ತ ಪಶು. ರಾಣಿ ಹೆತ್ತ ನಿಷ್ಕಲಂಕ ಶಿಶು ಸಾಂತಣ್ಣನದೇ ತೋರಿದ ಶಿಶು ಮರಳಿ ದೊರೆಯದಿದ್ದರೆ ಹೊನ್ನ ಹಳ್ಳಿಯ ಸಿಂಹಾಸನ ಶೂನ್ಯ ವಾಗುವುದು."

ನ್ಯಾಯ ಸ್ಥಾನದ ಒಳಗೆ ಮತ್ತು ಹೊರಗೆ ನೆರೆದ ಜನರು ನಿಃಶಬ್ದತೆಯಿಂದ ಕರಣಿಕನು ಓದಿದ ದೈವ ವಾಣಿಯನ್ನು ಕೇಳಿದರು. ರಾಣಿ ನಿರ್ದೋಷಿ ಯೆಂಬುದನ್ನರಿತು ಜನರು ಅಪರಿಮಿತ ಸಂತೋಷವನ್ನು ತಾಳಿದರು. ಅವರು "ರಾಣಿಗೆ ಭಗವತಿಯೇ ಸಾಕ್ಷಿಯಾದಳು! ಕೊಲ್ಲೂರು ಭಗವತಿಗೆ ಜಯವಾ ಗಲಿ!" ಎಂದು ಹರ್ಷೋದ್ಗಾರಗಳನ್ನು ಎತ್ತಿದರು.

ಜನರ ಸಂತೋಷೋದ್ಗಾರಗಳು ಅರಸನಿಗೆ ಪ್ರಿಯವಾಗಲಿಲ್ಲ. ಅವನು ಕರಣಿಕನ ಕಡೆ ತಿರುಗಿ, "ಇರುವುದನ್ನೆಲ್ಲಾ ಓದಿದೆಯಾ?" ಎಂದು ಪ್ರಶ್ನಿಸಿದ.

"ಹೌದು ಮಹಾಪ್ರಭೂ, ದೈವವಾಣಿಯನ್ನು ತಾವು ಪರಾಂಬರಿಸ ಬಹುದು." ಎಂದು ಕರಣಿಕನು ಓಲೆಯನ್ನು ದೊರೆಯ ಕೈಗೆ ನೀಡಿದ.

"ರಾಣಿಯ ನಿರ್ದೋಷತ್ವವನ್ನು ಕೊಲ್ಲೂರು ಭಗವತಿಯೇ ಸ್ಥಾಪಿಸಿರು ವಳು." ವಾಮನ ಶಾಸ್ತ್ರಿಗಳು ಅರಸನಿಗೆ ಉಸುರಿದರು: "ಇನ್ನು ರಾಣಿ ಯನ್ನು ನಿರ್ದೋಷಿಯೆಂದು ನಾವು ತೀರ್ಮಾನಿಸಬಹುದು."

ಮತ್ಸರದ ತಳಪಾಯದ ಮೇಲೆ ಸಂಶಯದ ಇಟ್ಟಿಗೆಗಳನ್ನಿರಿಸಿ ಸಾಂತಣ್ಣ ತಾನು ನಿರ್ಮಿಸಿದ ಸೌಧಕ್ಕೆ ರಾಣಿಯ ವಿಚಾರಣೆಯಿಂದ ಕಳಸವನ್ನೇರಿಸಲು ಬಯಸಿದ್ದ. ಆದರೆ ದೈವವಾಣಿಯ ಸಿಡಿಲಿನ ಆಘಾತಕ್ಕೆ ಅವನ ಕಟ್ಟಡ ನುಚ್ಚುನುರಿಯಾಗಿ ಹೋಯಿತು. ದೈವವಾಣಿ ಅರಸನ ಅಭಿಮಾನಕ್ಕೆ ಕೊಡಲಿ ಪೆಟ್ಟನ್ನು ನೀಡಿ ಪರಾಭವಗೊಳಿಸಿತ್ತು. ಆದರೆ ಅವನು ಅಷ್ಟು ಸುಲಭದಲ್ಲಿ ಸೋಲನ್ನು ಒಪ್ಪಿಕೊಳ್ಳುವವನಾಗಿರಲಿಲ್ಲ. ಅವನು "ಎಲ್ಲಾ ಸಂದರ್ಭಗಳಲ್ಲಿ ಕೊಲ್ಲೂರಿನ ದೈವವಾಣಿ ನಿಜವಾಗುವುದಿಲ್ಲ. ನಾನು ದೈವದ ಈ ಅರುಳನ್ನು ನಂಬುವುದಿಲ್ಲ. ವಿಚಾರಣೆ ಮುಂದೆ ಸಾಗಲಿ." ಎಂದು ಅಪ್ಪಣೆ ಮಾಡಿದ.

ಅರಸನು ದೈವವಾಣಿಯನ್ನು ನಂಬದೆ, ಅದನ್ನು ಮೀರುವನಲ್ಲ! ಎಂದು ಜನರು ಭಯ ಚಕಿತರಾದರು. ಅಷ್ಟರಲ್ಲಿ ಆಸ್ಥಾನದೊಳಗೆ ರಾಜಕುಮಾರ ಮಾದಣ್ಣನ ಸೇವಕನೊಬ್ಬ ರಾಜಾಸ್ಥಾನದೊಳಗೆ ನುಗ್ಗಿದ. ಅವನ ಮೊಗ ಬಿಳುಪೇರಿದ್ದಿತು, ಮೈ ಕೈಗಳು ಅರಳಿ ಎಲೆಯಂತೆ ಗಡಗಡನೆ ನಡುಗುತಿ ತಿದ್ದುವು. ಕಣ್ಣುಗಂಳಿದ ಬಾಷ್ಪಸ್ರೋತ ಧಾರಾಕಾರವಾಗಿ ಹರಿಯುತಿದ್ದಿತು.

"ಏನು ಚಂದಪ್ಪ ಏಕೆ ಅಳುವೆ?" ರಾಜ ಕೇಳಿದ.

"ಒಡೆಯರೆ, ರಾಜಕುಮಾರರು ಹೊರಟು ಹೋದರು."

"ಎಲ್ಲಿಗೆ? ಯಾವಾಗ?" ರಾಜನ ಮಾತಿನಲ್ಲಿ ಉತ್ಸುಕತೆ ತುಂಬಿತ್ತು.

"ರಾಜಕುಮಾರರು ಹೊರಟು ಹೋದರು; ಮರಳಿ ಬರದ ನಾಡಿಗೆ ಹೊರಟು ಹೋದರು! ಸಗ್ಗವನ್ನು ಸೂರೆಗೊಳ್ಳಲು ಹೊರಟು ಹೋದರು!" ಚಂದಪ್ಪ ಎರಡು ಕೈಗಳನ್ನು ಹಣೆಯ ಮೇಲೆ ಬಡಿದುಕೊಳ್ಳುತ್ತಾ ಶೋಕೋದ್ಗಾರ ವೆತ್ತಿದ.

"ಕೊಲ್ಲೂರು ಭಗವತಿ ತನ್ನ ವಾಣಿ ನಿಜವೆಂಬುದನ್ನು ನಮ್ಮಂತಹ ಸಂಶಯಚಿತ್ತರಿಗೆ ತೋರಿಸಿಕೊಟ್ಟಳು." ತಮ್ಮ ಕಣ್ಣುಗಳಲ್ಲಿ ತುಂಬಿದ ಹನಿಗಳನ್ನು ಬ್ರಹ್ಮ ವಸ್ತ್ರದಿಂದ ತೊಡೆಯುತ್ತಾ ವಾಮನ ಶಾಸ್ತ್ರಿಗಳು ಉಸುರಿದರು.

ಸಾಂತಣ್ಣ ಸಿಡಿಲು ಬಡಿದವನಂತೆ ರೆಪ್ಪೆ ಮಿಟುಕಿಸದೆ, ಮೈಕೈಗಳನ್ನು ಚಲಿಸದೆ ಸ್ತಬ್ಧನಾಗಿ ಕುಳಿತುಬಿಟ್ಟ. ಅವನನ್ನು ಮಾತಾಡಿಸುವ ಧೈರ್ಯ ಯಾರಿಗೂ ಆಗದು.

"ನನ್ನ ಕಂದಾ, ಮಾದಣ್ಣ, ನನಗಿಂತಲೂ ನೀನು ಭಾಗ್ಯಶಾಲಿ. ತಾಯಿಯ ಗೋಳನ್ನು ನೀನು ನೋಡಲಾರದೆ ಹೋದೆ. ಹೋಗುವಾಗ ನಿನ್ನ ಹತಭಾಗ್ಯ ತಾಯಿಯನ್ನು ಏಕೆ ಕರೆದುಕೊಂಡು ಹೋಗಲಿಲ್ಲ." ಎಂದು ಮಗನ ಮರಣ ವಾರ್ತೆಯನ್ನು ಅರಿತ ರಾಣಿ ರೋದಿಸಿದಳು. ಪುತ್ರ ಶೋಕಾಕ್ರಾಂತಳಾದ ಅವಳು ಖಡ್ಗಹತಿಯಿಂದ ಕೆಳಗುರುಳುವ ಬಾಳೆಯ ಗಿಡದಂತೆ ನೆಲದಲ್ಲಿ ಬಿದ್ದು ಹೊರಳಾಡಿದಳು.

ಗೆಳತಿ ಮೈಮರೆತುದನ್ನು ಕಂಡು ನಂಜಮ್ಮ ಮುಂದುವರಿದು, "ಪ್ರಭೂ ರಾಣಿ ಪುತ್ರ ಶೋಕದಿಂದ ಮೈಮರೆತಿರುವರು." ಎಂದು ಅರಿಕೆ ಮಾಡಿದಳು.

"ಅವಳನ್ನು ಕರೆದುಕೊಂಡು ಹೋಗಿ, ಶಿಶಿರೋಪಚಾರಗಳನ್ನು ಮಾಡಿಸು." ಎಂದು ದೊರೆ ಆಣತಿಗೈದ.

ದಾಸಿಯರು ಪ್ರಜ್ಞಾಶೂನ್ಯಳಾದ ರಾಣಿಯನ್ನು ಹಿಡಿದೆತ್ತಿ ಕರೆದುಕೊಂಡುಹೋದರು

ಅರಸನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯಿತು. ಹೃದಯದಲ್ಲಿ ಹೆಪ್ಪುಗಟ್ಟಿದ ದ್ವೇಷದ ಮಂಜೆಲ್ಲ ಪುತ್ರಶೋಕದ ಬೆಂಕಿಯಿಂದ ಕರಗಿ ನೀರಾಗಿ ಹೊರಹೊಮ್ಮುವಂತೆ ತೋರಿತು.

"ವಿಚಾರಣೆ ನಿಲ್ಲಲಿ. ನಾನು ಏಕಾಂತವನ್ನು ಬಯಸುವೆನು." ಎಂದು ಹೇಳಿ ಅರಸ ತನ್ನ ಪೀಠದಿಂದ ಎದ್ದ. ಅವನು ಭಾರವಾದ ಎದೆಯಿಂದ ಮಂತಣದ ಸಾಲೆಕಡೆಗೆ ತೆರಳಿದ. ವಾಮನ ಶಾಸ್ತ್ರಿಗಳು, ದುಗ್ಗಪ್ಪ, ಸಂಕಣ್ಣ ಮೊದಲಾದ ಆಪ್ತ ಸರದಾರರು ಅವನನ್ನು ಹಿಂಬಾಲಿಸಿದರು. ಜನರು ಭಗವತಿಯ ನುಡಿ ನಿಜವಾಯಿತೆಂದು ಕೌತುಕಪಡುತ್ತಾ ತಂತಮ್ಮ ಮನೆಗಳಿಗೆ ತೆರಳಿದರು.

"ಅರಸಾ, ಕಣ್ಣೀರು ಸುರಿಸು. ಅಳು." ವಾಮನ ಶಾಸ್ತ್ರಿಗಳು ಅಳುತ್ತಿದ್ದ ರಾಜನ ನೆತ್ತಿಯನ್ನು ನೇವರಿಸುತ್ತಾ ಹೇಳಿದರು. "ಪೂರ್ವದಲ್ಲಿ ಗಂಗೆ ಸಗರ ಪುತ್ರರ ಭಸ್ಮರಾಶಿಯನ್ನು ಕೊಚ್ಚಿಕೊಂಡು ಹೋದಂತೆ, ನಿನ್ನ ಕಣ್ಣೀರ ಗಂಗೆ ನಿನ್ನ ಎದೆಗಿಚ್ಚನ್ನು ಕೊಚ್ಚಿಕೊಂಡು ಹೋಗಲಿ!"

ಶಾಸ್ತ್ರಿಗಳ ಕೈಗಳ ಮೇಲೆ ಸಾಂತಣ್ಣ ಮಸ್ತಕವನ್ನು ಇರಿಸಿ ಪುಟ್ಟ ಹಸುಳೆಯಂತೆ ಬಿಕ್ಕಿ ಬಿಕ್ಕಿ ಅಳತೊಡಗಿದ. ಅರಸನ ಮಸ್ತಕದ ಮೇಲೆ ಶಾಸ್ತ್ರಿಗಳು ತಮ್ಮ ಕಣ್ಣುಗಳಿಂದ ಒಸರುತ್ತಿರುವ ಕರುಣಾಜಲವನ್ನು ಅಭಿಷೇಚಿಸಿದರು.

"ಶಾಸ್ತ್ರಿಗಳೇ,-ನಾನು ಪಾಪಿ. ಭೂಮಿಗೆ ಹೊರೆಯಾದ ಪಾತಕಿ." ಬಿಕ್ಕು ಮಾತಿನಲ್ಲಿ ಅರಸ ಉಸುರಿದ: "ಸೋದರನಂತಿದ್ದ ಗೆಳೆಯನಿಗೆ ದ್ರೋಹ ಬಗೆದೆ. ಸ್ವಾಮಿನಿಷ್ಠ ಸೇವಕನಿಗೆ ಎರಡು ಬಗೆದೆ. ನನ್ನನ್ನೇ ನಂಬಿ ನನ್ನ ಮನೆಯನ್ನು ಬೆಳಗಿಸಲೆಂದು ಬಂದ ಮಡದಿಗೆ ಪರಿಪರಿಯ ಬವಣೆಗಳನ್ನು ನೀಡಿ ಕಾಡಿದೆ. ಹೊನ್ನಹಳ್ಳಿಯ ರಾಜವಂಶವನ್ನು ಕೊನರಿಸಲೆಂದು ಜನ್ಮವೆತ್ತಿದ ಮಗನನ್ನು ತಾಯಿಯಿಂದ ಅಗಲಿಸಿ ಕೈಯಾರೆ ಕೊಂದೆ. ಕೊಲ್ಲೂರಿನ ಭಗವತಿ ನನ್ನನ್ನು ಎಚ್ಚರಿಸಿದರೂ, ಆಕೆಯನ್ನು ನಂಬದೆ ಅಲ್ಲಗಳೆದೆ.. ಈ ನನ್ನ ಪಾಪಗಳಿಗೆಲ್ಲಾ ಕೊನೆಯೆಲ್ಲಿ?"

"ದೊರೆಯೇ, ಮರುಗದಿರು. ಈ ರೀತಿಯಲ್ಲೇ ಆಗಬೇಕೆಂದು ದೈವ ಸಂಕಲ್ಪವಾಗಿತ್ತು. ನೀನು ದೈವದ ಕೈಯಲ್ಲಿರುವ ಗೊಂಬೆಯಾದೆ." ಶಾಸ್ತ್ರಿಗಳು ತಮ್ಮ ವೇದಾಂತದಿಂದ ದೊರೆಯನ್ನು ಸಮಾಧಾನಗೊಳಿಸಲು ಯತ್ನಿಸಿದರು: "ಪಶ್ಚಾತ್ತಾಪಾಗ್ನಿಯಿಂದ ಬೆಂದು ನಿನ್ನ ಪಾಪಗಳೆಲ್ಲವೂ ಬೂದಿಯಾಗುವುವು."

ನಂಜಮ್ಮ ಕಣ್ಣೀರುಗರೆಯುತ್ತಾ ಮಂತಣದ ಕೋಣೆಯೊಳಗೆ ನುಗ್ಗಿದಳು. ಅವಳ ಕೂದಲು ಕೆದರಿತ್ತು. ಭುಜದ ಮೇಲಿಂದ ಸೆರಗು ಜಾರಿದರೂ

ಆಕೆಗೆ ಅದರ ಪರಿವೆಯಿರಲಿಲ್ಲ. ಕೆದರಿದ ಕೂದಲು, ಕೆಂಪಡರಿದ ಕಣ್ಣು, ಉರಿಯುತ್ತಿರುವ ಮೊಗ,—ಇವುಗಳು ಶಾಸ್ತ್ರಿಗಳನ್ನು ಚಕಿತಗೊಳಿಸಿದುವು. ಅವರು ಗಾಬರಿಯಿಂದ, "ಏನಾಯಿತು ನಂಜಮ್ಮ?" ಎಂದು ಪ್ರಶ್ನಿಸಿದರು.

ಆಗುವುದೇನು? ಅರಮನೆಯನ್ನು ಮಸಣಮಾಡಬೇಕೆಂದು ದೊರೆಗಳ ಸಂಕಲ್ಪವಾಗಿತ್ತು. ಈಗ ಆ ಸಂಕಲ್ಪ ಈಡೇರಿತು. ಅವರಿನ್ನು ಹಾಲನ್ನ ಉಣ್ಣಲಿ. ಅವರ ದ್ವೇಷ ಮತ್ಸರಗಳು ಎಷ್ಟು ಎದೆಗಳನ್ನು ಸುಟ್ಟು ಬೆಂಗಾಡಾಗಿಸಿದುವು! ಎಷ್ಟು ಜೀವಗಳನ್ನು ಬಲಿತೆಗೆದುಕೊಂಡುವು!" ನಂಜಮ್ಮನ ಕೊರಳಿಂದ ನುಡಿಗಳ ಮಹಾಪೂರ ಹರಿಯತೊಡಗಿತು: "ದೊರೆಗಳೇ, ನೀವು ಸಂಶಯಗ್ರಸ್ತರಾಗಿ ಮಾದಣ್ಣನನ್ನು ತಾಯಿಯಿಂದ ಅಗಲಿಸಿದಿರಿ. ಈಗ ಅವನು ತಾಯಿಗಾದ ಅವಮಾನವನ್ನು ತಾಳಲಾಗದೆ ಹೃದಯವೇದನೆಯಿಂದ ಸ್ವರ್ಗಕ್ಕೆ ನಡೆದ. ಈಗ ಮಗನನ್ನು ಕಳೆದುಕೊಂಡ ರಾಣಿ ರಾಜಕುಮಾರನನ್ನು ಅರಸಲೆಂದು ನಾಕದ ಹಾದಿಯನ್ನು ಹಿಡಿದಳು. ನಿಮ್ಮ ಪ್ರತೀಕಾರದ ಜ್ವಾಲಾಮುಖಿಯಲ್ಲಿ ಆಕೆ ಬೆಂದು ಬೂದಿಯಾದಳು!"

"ರೇವಕ್ಕ ಇಲ್ಲವಾದಳೇ? ಕನಸಿನಲ್ಲಿ ಇರುವವನಂತೆ ದೊರೆ ಕೇಳಿದ.

"ಹೌದು, ನಿಮ್ಮ ಮಡದಿಯಾದುದರಿಂದ ಅವಳು ಅನುಭವಿಸಿದ ದುರಿತಗಳನ್ನು ಕಂಡು ಭಗವಂತನು ಕಣ್ಣೀರು ಸುರಿಸಿ ಆಕೆಯನ್ನು ತನ್ನ ಸನ್ನಿಧಿಗೆ ಕರೆದುಕೊಂಡ. ಭಗವತಿಯ ದೈವವಾಣಿ ಈಗ ಪೂರ್ಣ ಸತ್ಯವಾಯಿತು!"

"ಹೊನ್ನಹಳ್ಳಿಯ ರಾಜವಂಶದ ಮೇಲೆ ದೇವಿ ಆಗ್ರಹಗೊಂಡಿದ್ದಾಳೆ." ಎಂದು ವಾಮನ ಶಾಸ್ತ್ರಿಗಳು ಉಸುರಿದರು.

"ಒಡೆಯರೇ,—ನೀವು ರಾಣಿಯ ಮೊಗವನ್ನು ನೋಡಲು ಬಯಸಲಾರಿರೆಂದು, ಆಕೆಯನ್ನು ಮಸಣಕ್ಕೆ ಸಾಗಿಸಿಯಾಯಿತು. ಅವಳನ್ನು ಮಣ್ಣುಗೂಡಿಸುವುದು ಮಾತ್ರ ಉಳಿದಿದೆ. ಅದನ್ನೂ ನಾನೇ ನಿರ್ವಹಿಸುವೆನು." ಎಂದು ನುಡಿದ ನಂಜಮ್ಮ ಅರಸನ ಪ್ರತ್ಯುತ್ತರವನ್ನು ನಿರೀಕ್ಷಿಸದೆ ಹೊರಟು ಹೋದಳು.

"ಶಾಸ್ತ್ರಿಗಳೇ, ನಾನು ಮೂರ್ಖ; ಅವಿವೇಕಿ. ಬಿದಿರುಗಳೆರಡು ಪರಸ್ಪರ ಒರೆದಾಗ ಹುಟ್ಟಿದ ಕಿಚ್ಚು ಮೊದಲು ಮೆಳೆಯನ್ನೇ ಸುಟ್ಟು ಅನಂತರ ಕಾಡನ್ನು ಸುಡುವುದು ಎಂಬ ಯಥಾರ್ಥವನ್ನು ತಿಳಿಯದೆ ಹೋದೆ." ದೊರೆ ತನ್ನ ಎದೆಯ ಅಳಲನ್ನು ಶಾಸ್ತ್ರಿಗಳ ಮುಂದೆ ತೋಡಿಕೊಳ್ಳ ತೊಡಗಿದ: "ನನ್ನ

ಎದೆಯಲ್ಲಿ ಹುಟ್ಟಿದ ಮತ್ಸರದ ಕಿಚ್ಚು ನನ್ನ ಹೃದಯವನ್ನು ದಹಿಸಿ ಬರಿದಾಗಿಸಿತು; ಹೃದಯೇಶ್ವರಿಯನ್ನು ಇಲ್ಲವಾಗಿಸಿತು; ಕುಮಾರನನ್ನು ಮಸಣಕ್ಕಟ್ಟಿ ನನ್ನ ವಂಶವನ್ನೇ ಸುಟ್ಟಿತು. ಇನ್ನು ನಾನು ಬದುಕಿರುವುದೇಕೆ?"

"ದೊರೆಯೇ, ನಿನ್ನ ಮೇಲೆ ಒಂದು ನಾಡಿನ ಹೊಣೆಯಿದೆ. ನಿನ್ನ ಬೆಳ್ಗೊಡೆಯ ನೆರಳನ್ನು ಆಶ್ರಯಿಸಿದ ಪ್ರಜೆಗಳಿಗೋಸ್ಕರವಾಗಿಯಾದರೂ, ನೀನು ಈ ದಾರುಣ ದುಃಖವನ್ನು ತಾಳಿಕೊಳ್ಳಬೇಕು". ಶಾಸ್ತ್ರಿಗಳ ಕೊರಳಿನಿಂದ ಸಮಾಧಾನೋಕ್ತಿ ಹೊರಟಿತು: "ಇರುಳು ಕಳೆದ ಮೇಲೆ ಹಗಲು ಬರುವುದು. ದುಃಖದ ರಾತ್ರಿಯ ಅನಂತರ ಸೊಗದ ಹೊಂಬಿಸಿಲು ಗೋಚರಿಸದಿರದು"

"ಇನ್ನೆಲ್ಲಿ ಸೊಗದ ಹೊಂಬಿಸಿಲು?—ರೇವಕ್ಕನಿಲ್ಲದ ಬಾಳು ಚಂದ್ರನಿಲ್ಲದ ಇರುಳು!" ಎಂಬ ಶೋಕೋದ್ಗಾರ ಅರಸನ ತುಟಿಗಳಿಂದ ಬಿರಿದು ಬಂದಿತು.

---

## ಹತ್ತು

"ಟಗರೆರಡರ ಹೋರಾಟ ಗಿಡಕ್ಕೆ ಮೃತ್ಯು" ಎಂಬ ಗಾದೆಯ ಸತ್ಯ ಲಿಂಗಯ್ಯನ ಅನುಭವಕ್ಕೆ ಬಂದಿತು. ಮೊದಲು ಲಿಂಗಯ್ಯ ಕೃಷ್ಣಾ ನದಿಯ ತೀರದಲ್ಲಿರುವ ದೇವನ ಹಳ್ಳಿಯ ಒಬ್ಬ ಒಕ್ಕಲಿಗನಾಗಿದ್ದ. ಅವನು ಪೆದ್ದೊರೆಯ ದಂಡೆಯಲ್ಲಿದ್ದಾಗ ಅನುಕೂಲಸ್ಥನಾಗಿದ್ದ. ನಾಲ್ಕು ಜತೆ ಎತ್ತುಗಳ ಹೊಲವಿತ್ತು. ಹತ್ತೆಂಟು ಕರೆವ ಹೈನಗಳು ಹಟ್ಟಿಯಲ್ಲಿದ್ದುವು. ಮನೆಯನ್ನು ಬೆಳಗಿಸಲು ಮಡದಿಯಾಗಿ ಬಂದ ಮಲ್ಲಮ್ಮ ಬಾಳುವೆಯ ನೊಗಕ್ಕೆ ಅವನೊಡನೆ ಹೆಗಲೊಡ್ಡಿದ್ದಳು. ಕುಲವನ್ನು ಬೆಳಗಿಸಲು ನರಸಣ್ಣನೆಂಬ ಒಬ್ಬ ಮಗನಿದ್ದ. ಲಿಂಗಯ್ಯನ ಮನೆಯಲ್ಲಿ ಹಾಲು ಹೊನಲಾಗಿ ಹರಿಯುತಿದ್ದಿತು. ಧಾನ್ಯಲಕ್ಷ್ಮಿ ಅವನ ಕಣಜದಲ್ಲಿ ನೆಲಸಿದ್ದಳು. ಮಲ್ಲಮ್ಮ ಚೆಲುವೆಯಾಗಿ, ಅವನ ಪ್ರೀತಿವಿಶ್ವಾಸಗಳಿಗೆ ಆಸರೆಯಾಗಿ, ಅವನ ಬಾಳ್ವೆಯ ಹೂದೋಟದಲ್ಲಿ ಸೊಗದ ಬೆಳ್ದಿಂಗಳನ್ನು ಹರಡಿದ್ದಳು. ಊರ ಜನರು ಲಿಂಗಯ್ಯನನ್ನು ಭಾಗ್ಯವಂತನೆಂದು ಕೊಂಡಾಡುತಿದ್ದರು.

ಒಮ್ಮಿಂದೊಮ್ಮೆ ಅವರ ಜೀವನ ನೌಕೆ ಬಿರುಗಾಳಿಯ ಆಘಾತಕ್ಕೆ ಸಿಲುಕಿತು. ಪೆದ್ದೊರೆಯ ಉತ್ತರದಲ್ಲಿ ರಾಜ್ಯವಾಳುತಿದ್ದ ಸೇವುಣರು ಹೊಯ್ಸಳ ರಾಜ್ಯದ ಮೇಲೆ ಅಭಿಯೋಗವನ್ನು ನಡೆಸುವ ಹಂಚಿಕೆಯನ್ನು

ಕೈಗೊಂಡರು. ಇವರು ನದಿಯನ್ನು ದಾಟಿ ಹಳ್ಳಿಗರ ದನಕರುಗಳನ್ನು ಅಪ ಹರಿಸತೊಡಗಿದರು; ಹಳ್ಳಿಯನ್ನು ಸೂರೆಗೈಯ ತೊಡಗಿದರು. ದೂರದ ಹೊಯ್ಸಳ ರಾಜಧಾನಿಯ ನೆರವಿಲ್ಲದೆ ಸ್ಥಳೀಯ ಮಾಂಡಲಿಕ ಪ್ರಭು ಹಗೆ ಗಳನ್ನು ತಡೆದುನಿಲ್ಲಿಸಲು ಅಸಮರ್ಥನಾದ.

ಸೇವುಣರು ದೇವನ ಹಳ್ಳಿಯನ್ನು ಆಕ್ರಮಿಸಿದರು. ಊರಜನರು ಒಂದುಗೂಡಿ ಹಗೆಗಳನ್ನು ಸೋಲಿಸಿ ಹಿಂದಟ್ಟಲು ಪ್ರಯತ್ನಿಸಿದರು. ಆದರೆ ಹಗೆಗಳು ಯುದ್ಧವಿದ್ಯೆಯಲ್ಲಿ ಪಳಗಿದ ಸೈನಿಕರಾಗಿದ್ದರು. ಹಳ್ಳಿಯ ಜನ ಕದನವಿದ್ಯಾಕೌಶಲ್ಯವಿಲ್ಲದ ಒಕ್ಕಲುಮಕ್ಕಳಾಗಿದ್ದರು. ಅವರು ಧೈರ್ಯ ದಿಂದ ಹೋರಾಡಿದರೂ, ಹಗೆಗಳನ್ನು ಸೋಲಿಸಿ ಹಿಂದಟ್ಟಲು ಅಸಮರ್ಥರಾದರು. ಅವರು ಪರಾಭವಪಟ್ಟು ಹಿಂದೆ ಸರಿಯಬೇಕಾಯಿತು. ಈ ಕಾಳಗದಲ್ಲಿ ಲಿಂಗಯ್ಯ ತನ್ನ ಏಕಮಾತ್ರ ಪುತ್ರ ನರಸಣ್ಣನನ್ನು ಕಳೆದುಕೊಂಡ.

ಹಗೆಗಳು ಊರನ್ನು ವಶಪಡಿಸಿಕೊಂಡರು. ದನಕರುಗಳನ್ನು ಸುಲಿಗೆ ಮಾಡಿದರು. ಮನೆಮಠಗಳಲ್ಲಿ ತುಂಬಿದ್ದ ದವಸಧಾನ್ಯಗಳನ್ನು ಸೂರೆಮಾಡಿ ಮನೆಗಳಿಗೆ ಕಿಚ್ಚನ್ನಿಕ್ಕಿದರು. ಊರು ಬೆಂದು ಬೂದಿಯಾಯಿತು. ಲಿಂಗ ಯ್ಯನ ದನಕರುಗಳು ಸೂರೆಯಾದುವು. ಮನೆ ಅಗ್ನಿದೇವನಿಗೆ ಆಹುತಿ ಯಾಯಿತು. ಮುಪ್ಪಿನಲ್ಲಿ ಆಸರೆಯಾಗಿದ್ದ ಮಗನನ್ನು ಯುದ್ಧ ನುಂಗಿತು. ಅವನ ಜೀವಮಾನದ ಸಾಧನೆಯನ್ನು ಯುದ್ಧ ಒಂದು ದಿನದಲ್ಲಿ ವಿಫಲಗೊಳಿ ಸಿತ್ತು. ಅವನು ಸಂಸಾರ ಸೌಧ ನಿರ್ಮಾಣವನ್ನು ಮತ್ತೆ ತಳಪಾಯದಿಂದ ಆರಂಭಿಸಬೇಕಾಯಿತು.

ಮಗನನ್ನು ಬಲಿತೆಗೆದುಕೊಂಡ ದೇವನಹಳ್ಳಿಯಲ್ಲಿ ಇರುವುದು ಬೇಡ ವೆಂದು ಲಿಂಗಯ್ಯನಿಗೆ ಅನಿಸಿತು. ಅವನು ಮಲ್ಲಮ್ಮನನ್ನು ಕರೆದುಕೊಂಡು ತೆಂಕಣದ ಹಾದಿಯನ್ನು ಹಿಡಿದ. ಅವನು ಗೋಕರ್ಣಕ್ಕೆ ಬಂದು ಅಲ್ಲಿ ಗೋಕರ್ಣನಾಥನಿಗೆ ಸೇವೆ ಸಲ್ಲಿಸಿದ. ಅನಂತರ ಅವರು ನೌಕೆಯನ್ನೇರಿ ಗಂಗವಳ್ಳಿಗೆ ಪ್ರಯಾಣಮಾಡಿದರು.

ಗಂಗವಳ್ಳಿಯಲ್ಲಿ ಲಿಂಗಯ್ಯ ಉಪಜೀವನಕ್ಕೆ ಒಂದು ಹಾದಿಯನ್ನು ಹುಡುಕಬೇಕಾಯಿತು. ಬೇಸಾಯವಲ್ಲದೆ ಬೇರೆ ಯಾವ ವೃತ್ತಿಯೂ ಅವನಿಗೆ ತಿಳಿಯದು. ಬಂಗಾರಕಟ್ಟೆಯಲ್ಲಿ ಆದಿರಾಜ ಸೆಟ್ಟಿಯಿಂದ ಅವನು ಒಂದು ಜತೆ ಎತ್ತಿನ ನೆಲವನ್ನು ಗೇಣಿಗೆ ಪಡೆದುಕೊಂಡು ಬೇಸಾಯಮಾಡತೊಡಗಿದ;

ಘಟ್ಟದೊಂದು ಗುಡಿಸಲನ್ನು ಕಟ್ಟಿ ಹೊಸ ಸಂಸಾರ ಹೂಡಿದ. ಬೇಸಾಯವಿಲ್ಲದ ಬಿಡುವು ವೇಳೆಯಲ್ಲಿ ಆತ ಧನಿಗಳ ತುರುಗಳನ್ನು ಕಾಯುತ್ತಿದ್ದ. ಬೇಸಾಯ ತುರುಗಾಯ್ಕೆಗಳಿಂದ ಆ ದಂಪತಿಗಳ ಉಪಜೀವನಕ್ಕೆ ಸಾಕಾಗುವಷ್ಟು ಉತ್ಪತ್ತಿ ದೊರಕುತ್ತಿದ್ದಿತು. ಆ ಬಡ ದಂಪತಿಗಳು ದೊರೆಯುತ್ತಿದ್ದ ಸಂಪಾದನೆಯಲ್ಲಿ ನಲವಿಂದ ದಿನಗಳನ್ನು ಕಳೆಯುತ್ತಿದ್ದರು. ಅವನಿಗೆ ಹೆಚ್ಚಿನ ಬಯಕೆಗಳೇನೂ ಇರಲಿಲ್ಲ. ಮನೆಯನ್ನು ಬೆಳಗಿಸುವ ಮಗುವೊಂದಿಲ್ಲವಲ್ಲ ಎಂಬ ಚಿಂತೆ ಆ ಸತಿಪತಿಯರ ಎದೆಗಳನ್ನು ಕೊರೆಯುತ್ತಿದ್ದಿತು.

ಮಾಘ ಮಾಸದ ಒಂದು ಮುಂಜಾನೆ ತುಂಬಾ ಚಳಿಯಿತ್ತು. ಘಟ್ಟದ ಕಡೆಯಿಂದ ಬೀಸುವ ಚಳಿಗಾಳಿ ಮೈಯನ್ನು ಕೊರೆಯುತ್ತಿದ್ದಿತು. ಹಿಂದಿನ ರಾತ್ರಿ ಲಿಂಗಯ್ಯನ ಒಂದು ಗಬ್ಬದ ಹಸು ಹಟ್ಟಿಗೆ ಬಾರದೆ ತಪ್ಪಿಸಿಕೊಂಡಿತ್ತು. ಅದೆಲ್ಲಿ ಕಾಡಿನಲ್ಲಿ ಹುಲಿ-ಚಿರತೆಗಳ ಬಾಯಿಗೆ ತುತ್ತಾಯಿತೋ ಎಂಬ ಚಿಂತೆ ಅವನನ್ನು ಬಾಧಿಸುತ್ತಿದ್ದಿತು. ಆದುದರಿಂದ ಅವನು ಬೆಳ್ಳಿ ಮೂಡುವ ಮುನ್ನ ಎದ್ದು ಕೈಯಲ್ಲಿ ದೊಣ್ಣೆಯನ್ನು ಹಿಡಿದು ಕಾಣೆಯಾದ ಹಸುವನ್ನು ಅರಸಲು ಹೊರಟ.

ಅವನು ಕಾಡಿನಲ್ಲಿ "ಗೋಪಿ ಬಾ" ಎಂದು ಹಸುವನ್ನು ಹೆಸರು ಹಿಡಿದು ಕೂಗುತ್ತಾ ಅಲೆದ. ಆದರೆ ಅವನ ದನಿಗೇಳಿ ಗೋಪಿ "ಅಂಬಾ" ಎಂದು ಓ ಕೊಡಲಿಲ್ಲ. ಅವನು ಹಾಗೆಯೇ ಸಂಚರಿಸುತ್ತಾ ಒಂದು ಗುಡ್ಡದ ಹತ್ತಿರ ಬಂದ. ಗುಡ್ಡದ ಇನ್ನೊಂದು ಪಾರ್ಶ್ವದಲ್ಲಿ ಕಡಲು ಭೋರ್ಗರೆಯುತ್ತಿದ್ದಿತು. ಮೇಯಲು ಗುಡ್ಡವೇರಿದ ಹಸು ಕಾಲು ಜಾರಿ ಕೆಳಗೆ ಹಳ್ಳದಲ್ಲಿ ಬಿದ್ದಿರ ಬಹುದೇ ಎಂಬ ಸಂದೇಹ ಅವನ ಮನಸ್ಸಿನಲ್ಲಿ ಉದಿಸಿತು. ಅವನು ಗುಡ್ಡ ವನ್ನೇರಿದ. ಗುಡ್ಡ ತುಂಬಾ ಮರಗಿಡಗಳಿದ್ದುವು. ಪೊದೆಗಳು ಅಲ್ಲಲ್ಲಿ ಬೆಳೆ ದಿದ್ದುವು.

ಲಿಂಗಯ್ಯ ಗುಡ್ಡವನ್ನೇರಿ, ಆಚೆ ತನ್ನ ದೃಷ್ಟಿಯನ್ನು ಪಸರಿಸಿದ. ಗುಡ್ಡದ ಕೆಳಗಿನ ಹಳ್ಳಕ್ಕೆ ಗೋಪಿಯೇನೂ ಬಿದ್ದಿರಲಿಲ್ಲ. ಐನೂರು ಮಾರು ಗಳಾಚೆ ಇರುವ ಕಡಲು ಅವನ ದೃಷ್ಟಿಯನ್ನು ಸೆಳೆಯಿತು. ಕಡಲ ದಂಡೆಯಲ್ಲಿ ಒಂದು ಸಣ್ಣ ಮಂಜಿ ನಿಂತಿದ್ದಿತು. ಪರವೂರುಗಳಿಂದ ಬಂದ ಮಂಜಿಗಳು ಊರ ಬಂದರಿನಲ್ಲಿ ತಂಗುವುದು ಸ್ವಾಭಾವಿಕ. ಆದರೆ ಈ ನೌಕೆ ಊರಿಗೆ ಹೋಗದೆ, ಊರಿನಿಂದ ಎರಡು ಹರದಾರಿ ದೂರದಲ್ಲಿ, ನಿರ್ಜನವಾದ

ಅಪಾಯಕರ ಸ್ಥಳದಲ್ಲಿ ತಂಗಿದುದೇಕೆ ಎಂಬ ಸಂದೇಹ ಅವನಲ್ಲಿ ಸಹಜವಾಗಿ ಜನಿಸಿತು. ಆದುದರಿಂದ ನಾವೆಯಲ್ಲಿರುವವರೇನು ಮಾಡುತ್ತಿರುವರೆಂಬುದನ್ನು ಅವನು ಒಂದು ಹಾಸರೆಯ ಮೇಲೆ ಕುಳಿತು ದಿಟ್ಟಿಸತೊಡಗಿದ.

ನೌಕೆಯಿಂದ ಒಬ್ಬ ಮನುಷ್ಯ ಇಳಿದ. ತನ್ನ ಎರಡು ಕೈಗಳಲ್ಲಿ ಏನನ್ನೋ ಹಿಡಿದುಕೊಂಡಿದ್ದ. ಅವನು ದಡವನ್ನು ದಿಟ್ಟಿಸಿ ನೋಡಿ ಮೆಲ್ಲಗೆ ಗುಡ್ಡವನ್ನೇರ ತೊಡಗಿದ ಗುಡ್ಡ ಕಡಿದಾದುದು. ಆದುದರಿಂದ ಅವನು ಬಹು ಮೆಲ್ಲನೆ ಗುಡ್ಡವನ್ನಡರುತಿದ್ದ. ಅವನ ಶರೀರ ಕೃಶವಾಗಿದ್ದುದರಿಂದ ಉಬ್ಬಸ ಬಿಡುತಿದ್ದ. ಅವನು ಒಂದು ಗಳಿಗೆಯಲ್ಲಿ ಗುಡ್ಡದ ತುದಿಗೆ ಬಂದ. ಅಲ್ಲಿ ಒಂದು ಹಾಸರೆಯಿದ್ದಿತು. ಅವನು ತಾನು ತಂದ ವಸ್ತುವನ್ನು ಹಾಸರೆಯ ಮೇಲಿರಿಸಿದ. ಅವನು ಒಂದು ಕ್ಷಣ ತಾನು ಇರಿಸಿದ ವಸ್ತುವನ್ನೇ ದಿಟ್ಟಿಸಿ ನೋಡಿದ. ಅವನ ಕಣ್ಣುಗಳಿಂದ ಅಶ್ರುಕಣಗಳು ಉದುರಿದುವು. ಅನಂತರ ಅವನು ಭಾರವಾದ ಹಜ್ಜೆಗಳನ್ನಿರಿಸುತ್ತಾ ಮಂಜಿಯಿದ್ದೆಡೆಗೆ ಮರಳಿದ. ಅವನು ಇನ್ನೂ ಕಡಲ ದಡವನ್ನು ಸೇರಿರಲಿಲ್ಲ. ಮಂಜಿಗೆ ಅವನಿದ್ದ ಸ್ಥಳದಿಂದ ಇನ್ನೂರು ಮಾರು ದೂರವಿದೆ. ಅನಿತರಲ್ಲಿ ಎಡ ಪಾರ್ಶ್ವದಲ್ಲಿದ್ದ ಒಂದು ದೊಡ್ಡ ಬಂಡೆಗಲ್ಲಿನ ಮರೆಯಿಂದ ಒಂದು ಹೆಬ್ಬುಲಿ ನೆಗೆಯಿತು. ದೋಣಿಯ ಕಡೆ ಸಾಗುತಿದ್ದ ವ್ಯಕ್ತಿಯನ್ನು ತಡೆಯಿತು. ಅವನು ಭಯಾಕ್ರಾಂತನಾಗಿ "ಅಯ್ಯೋ! ಹುಲಿ!!" ಎಂದು ಉದ್ಗಾರವನ್ನೆತ್ತಿದ.

ಹುಲಿ ನೆಗೆದು ತನ್ನ ಕ್ರೂರ ದಾಡೆಗಳಿಂದ ಆ ಮನುಷ್ಯನ ಕೊರಳನ್ನು ಬಿಗಿ ಹಿಡಿಯಿತು. ಅವನ ಶ್ವಾಸ ನಾಳಗಳನ್ನು ಕಡಿದು ತುಂಡರಿಸಿ, ಅವನ ಜೀವನ ಯಾತ್ರೆಯನ್ನು ಕೊನೆಗೊಳಿಸಿತು. ಅವನು ಹುಲಿಯಿಂದ ಹತನಾದುದನ್ನು ಕಂಡು, ಮಂಜಿಯಲ್ಲಿದ್ದವರು ಮಂಜಿಯನ್ನು ಕಡಲಲ್ಲಿ ತೇಲಬಿಟ್ಟರು. ಅರೆಗಳಿಗೆಯಲ್ಲಿ ಅದು ಲಿಂಗಯ್ಯನ ದೃಷ್ಟಿಯಿಂದ ಮರೆಯಾಯಿತು.

ಆ ವ್ಯಕ್ತಿ ಗುಡ್ಡದಿಂದ ಇಳಿದು ಬರುವಾಗ ಅವನ ಕೈಗಳು ತೆರವಾಗಿದ್ದುದನ್ನು ಲಿಂಗಯ್ಯ ನೋಡಿದ್ದ. ಅವನು ತಾನು ತಂದ ವಸ್ತುವನ್ನು ಗುಡ್ಡದ ತುದಿಯಲ್ಲಿ ಬಿಟ್ಟು ಹೋಗಿರಬೇಕೆಂದು ಊಹಿಸಿದ. ಅದೇನೆಂದು ತಿಳಿಯುವ ಉತ್ಸುಕತೆ ಅವನಲ್ಲಿ ಮೂಡಿತು. ಅವನು ಅಪರಿಚಿತ ವ್ಯಕ್ತಿ ತಲುಪಿದ ಎಡೆಯ ಕಡೆ ಅಡಿಗಳನ್ನಿರಿಸ ತೊಡಗಿದ.

ಲಿಂಗಯ್ಯ ಅಧಿಕ ಸಮಯ ಅರಸಬೇಕಾಗಿ ಬರಲಿಲ್ಲ. ಒಂದು ಉನ್ನತ

ವೃಕ್ಷದ ಅಡಿಯಲ್ಲಿ ನೀಲಿ ಬಣ್ಣದ ವಸ್ತುವೊಂದು ಲಿಂಗಯ್ಯನಿಗೆ ಕಾಣಿಸಿತು. ಅವನು ಅದರೆಡೆಗೆ ಸರಿದ. ಹಾಸುಗಲ್ಲಿನ ಮೇಲೆ ಒಂದು ದೊಡ್ಡ ತಳಿಗೆಯಿತ್ತು. ಅದಕ್ಕೆ ನೀಲಿಯ ಪಟ್ಟೆಯನ್ನು ಹೊದೆಸಲಾಗಿತ್ತು. ತಳಿಗೆಯಲ್ಲಿರುವುದೇನು ಎಂಬುದನ್ನು ಅರಿಯುವ ಆತುರದಿಂದ ಮುಚ್ಚಿದ್ದ ಪಟ್ಟೆಯನ್ನು ಅವನು ಎಳೆದ. ಆಗ ಅವನ ದೃಷ್ಟಿಗೆ ಬಿದ್ದ ನೋಟ ಅವನು ಆಶ್ಚರ್ಯದಿಂದ ಮೈ ಮರೆಯುವಂತೆ ಮಾಡಿತು! ಅವನು ನಟ್ಟ ಕಣ್ಣುಗಳಿಂದ ತಳಿಗೆಯನ್ನೇ ನೋಡ ತೊಡಗಿದ!

ತಳಿಗೆಯಲ್ಲಿ ಎರಡು ತಿಂಗಳಾಗದ ಒಂದು ಹೆಣ್ಣು ಕೂಸು ಬೆರಳನ್ನು ಬಾಯಲ್ಲಿರಿಸಿಕೊಂಡು ನಿದ್ದೆ ಮಾಡುತಿದ್ದಿತು. ಕೈಕಾಲುಗಳಲ್ಲಿ ಬಂಗಾರದ ಸಣ್ಣ ಬಳೆಗಳಿದ್ದವು. ಬೆರಳುಗಳಲ್ಲಿ ಪುಟ್ಟ ಉಂಗುರಗಳು ಮಿನುಗುತಿದ್ದುವು. ಚಂದ್ರನ ಸುತ್ತಲೂ ತಾರೆಗಳು ಹೊಳೆಯುವಂತೆ ಮಗುವಿನ ಸುತ್ತಲೂ ಬಗೆ ಬಗೆಯ ರತ್ನಾಭರಣಗಳು ಕಾಂತಿಯ ಕಿರಣಗಳನ್ನು ಕೆದರುತಿದ್ದುವು. ಮಗುವನ್ನು ಮಲಗಿಸಿದ ತಳಿಗೆ ಹಿತ್ತಾಳೆಯದಾಗಿರದೆ ಬಂಗಾರದ್ದಾಗಿದ್ದಿತು. ಮಗುವಿನ ಮೈಬಣ್ಣ ಹಾಲಿನ ಕೆನೆಯಂತಿದ್ದಿತು.

ಲಿಂಗಯ್ಯ ಬಹು ಹೊತ್ತು ಶಿಶುವನ್ನು ಎವೆಯಿಕ್ಕದೆ ನೋಡಿದ. ಅವನಿಗೆ ಕೂಸನ್ನು ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ. ಈ ಅನಾಥ ಶಿಶುವನ್ನು ಕಂಡು ಅವನ ಎದೆ ಕರಗಿತು. ಹಾಗೆಯೇ ಅವನು ಎರಡು ಕೈಗಳಿಂದಲೂ ಶಿಶುವನ್ನು ಎತ್ತಿಕೊಂಡ. "ಕಂದ, ಯಾವ ಪಾಪಿ ಕಾಡುಮಿಗಗಳ ಬಾಯಿಗೆ ತುತ್ತಾಗಲೆಂದು ನಿನ್ನನ್ನು ಈ ನಿರ್ಜೀವ ಸ್ಥಳದಲ್ಲಿ ಬಿಟ್ಟುಹೋದ?" ಲಿಂಗಯ್ಯನ ತುಟಿಗಳಿಂದ ಮರುಕದ ನುಡಿ ಹೊರಬಂತು: "ಅವನು ಮಾಡಿದ ಪಾಪಕ್ಕೆ ದೇವರು ತಕ್ಕ ಶಾಸ್ತಿ ಮಾಡಿದ. ಅವನು ಮಾಡಿದ ಪಾಪವೇ ಹೆಬ್ಬುಲಿಯ ರೂಪದಲ್ಲಿ ಬಂದು ಅವನ ಪ್ರಾಣ ತೆಗೆಯಿತು."

ಲಿಂಗಯ್ಯ ಮಗುವನ್ನೆತ್ತಿಕೊಂಡು ಮನೆಯ ಕಡೆ ಸಾಗಿದ. ಅವನು ಕಾಡು ದಾಟಿ ಬಯಲಿಗೆ ಬಂದ. ಮೂಡಣದಲ್ಲಿ ನೇಸರುದಿಸಿ ತನ್ನ ಹೊಂಗಿರಣಗಳನ್ನು ಹರಡುತಿದ್ದ. ಲಿಂಗಯ್ಯ ಸೂರ್ಯನನ್ನೊಮ್ಮೆ ದಿಟ್ಟಿಸಿ ನೋಡಿದ. ಅವನ ಎದೆಯಿಂದ, "ಸ್ವಾಮಿ, ನನ್ನ ಅನೇಕ ದಿನಗಳ ಮೊರೆಗೆ ಈ ದಿನ ಕಿವಿಗೊಟ್ಟೆ. ನನ್ನ ಮನೆಯನ್ನು ಬೆಳಗಿಸುವ ದೀಪವನ್ನಿತ್ತುದುದಲ್ಲದೆ, ಭಾಗ್ಯವನ್ನೂ ದಯಪಾಲಿಸಿದೆ." ಎಂಬ ಕೃತಜ್ಞತೆಯ ಬಿನ್ನಹ ಹೊರಟಿತು.

ಲಿಂಗಯ್ಯ ಮನೆಯನ್ನು ಸೇರಿ ಸಡಗರದಿಂದ "ಮಲ್ಲೀ" ಎಂದು ಮಡದಿಯನ್ನು ಕೂಗಿದ.

"ಏನು ಗೋಪಿ ಹಸು ಸಿಗ್ತಾ?" ಹಿತ್ತಲಲ್ಲಿ ಮುಸುರೆ ಪಾತ್ರೆಗಳನ್ನು ತಿಕ್ಕುತಿದ್ದ ಮಲ್ಲಮ್ಮ ಪ್ರಶ್ನಿಸಿದಳು.

"ಗೋಪಿ ಹೋಗ್ಲಿ. ಭಾಗ್ಯ ತಂದಿವ್ನಿ" ಎಂದು ಉತ್ಸಾಹದಿಂದ ಹೇಳಿದ ಲಿಂಗಯ್ಯ. "ನರಸಣ್ಣ ಹೊಂಟು ಹೋದಾಗ್ಲೇ ನಮ್ಮ ಸಕಲ ಭಾಗ್ಯಾನೂ ಹೊಂಟು ಹೋಯ್ತು!" ಮುಸುರೆ ತೊಳೆಯುವಲ್ಲಿಂದಲೇ ಮಲ್ಲಮ್ಮ ಉತ್ತರಿಸಿದಳು.

"ಮೇಲಿರೋ ಸೋಮಿ ಕಣ್ ತೆರೆದಾಗ, ಲಕ್ಷ್ಮಿ ಮನೆ ಬಾಗಿಲ್ ತಾವ ಓಡಿ ಬತ್ತಾಳೆ!" ಎಂದು ಹೇಳುತ್ತಾ ಲಿಂಗಯ್ಯ ಗುಡಿಸಿಲೊಳಗೆ ನುಗ್ಗಿದ.

"ಏನ್ ನೀನ್ ತಂದಿರೋ ಭಾಗ್ಯಾನ ನೋಡ್ತೀನಿ," ಎಂದು ನುಡಿಯುತ್ತಾ ಮಲ್ಲಮ್ಮ ಕೈಗಳನ್ನು ತೊಳೆದುಕೊಂಡು ಗುಡಿಸಿಲೊಳಗೆ ಓಡಿ ಬಂದಳು.

"ಲೇ ಮಲ್ಲೀ, ಇಲ್ನೋಡೆ." ಎಂದು ಹೇಳುತ್ತಾ ಲಿಂಗಯ್ಯ ಕೂಸಿಗೆ ಹೊದೆಸಿದ ಪಟ್ಟೆಯರಿವೆಯನ್ನು ತೆಗೆದು ಹೊಂದಳಿಗೆಯನ್ನು ಮಡದಿಯ ಕೈಗೆ ನೀಡಿದ.

ಹೊಂದಳಿಗೆಯಲ್ಲಿದ್ದ ಮಗುವನ್ನು ಮಲ್ಲಮ್ಮ ನೋಡಿದಳು. ಅವಳಿಗಾದ ಆಶ್ಚರ್ಯಕ್ಕೆ ಮೇರೆಯಿಲ್ಲ. ಅವಳು ಶಿಶುವನ್ನು ಎವೆಯಿಕ್ಕದೆ ನೋಡುತ್ತಾ "ಗೋಪೀನ ಅರಸ ಹೋದವ್ನಿಗೆ ಈ ಕೂಸೆಂಗೆ ಸಿಕ್ತು?" ಎಂದು ಪತಿಯನ್ನು ಕೇಳಿದಳು.

ಲಿಂಗಯ್ಯ, "ಓ ಮಾರಾಯಿತಿ, ಏಸಿ ರೊಟ್ಟಿ ಮಜ್ಜಿಗೇನಾದ್ರೂ ಮೊದ್ಲು ಕೊಟ್ಟು ಹಸ್ದಿರೋ ಹೊಟ್ಟೇನ ತಂಪು ಮಾಡು. ಅದೊಂದು ದೊಡ್ಡ ಕತೆಯೈತಿ" ಎಂದು ಹೇಳಿದ.

ಗಂಡ ಹೆಂಡಿರ ಮಾತುಕೇಳಿ ಕೂಸು ಎಚ್ಚರಗೊಂಡಿತು. ಅದು "ಕಿರೋ" ಎಂದು ಕಿರಿಚತೊಡಗಿತು. ಮಲ್ಲಮ್ಮನ ಹೆಣ್ಣೆದೆ ಕರಗಿತು. ಅವಳು "ಕೂಸು ಅಳುತ್ತದೆ ಹಸ್ದಿದಿಯೋ ಏನೋ. ನಾನು ಒಂದೀಟು ಹಾಲು ಬಿಸಿಮಾಡಿ ತರ್ತಿವ್ನಿ". ಎಂದು ನುಡಿದು ಅಡುಗೆ ಕೋಣೆಯೊಳಗೆ

ನುಗ್ಗಿದಳು. ಹಾಲು ಬಿಸಿಮಾಡಿ ತಂದಳು; ಹಸಿದಿದ್ದ ಶಿಶುವಿಗೆ ಹಾಲು ಕುಡಿಸಿದಳು. ಹೊಟ್ಟೆ ತುಂಬಲು ಮಗು ಅಳು ನಿಲ್ಲಿಸಿ ಮಲ್ಲಮ್ಮನ ಮೊಗವನ್ನು ಪಿಳಪಿಳನೆ ನೋಡತೊಡಗಿತು. ಅವಳು ಮಗುವಿನ ಮುದ್ದು ಮೊಗವನ್ನು ನಿಟ್ಟಿಸಿ "ಅಯ್ಯಾ, ಕೂಸು ಏಟು ಚಂದಾಗೈತೆ". ಎಂದು ಹೇಳಿ ಹಸುಳೆಯನ್ನು ತನ್ನ ಎದೆಗೆ ಅಪ್ಪಿಕೊಂಡಳು. ಲಿಂಗಯ್ಯ ಕೂಸು ತನಗೆ ದೊರೆತ ಕತೆಯನ್ನು ಮಡದಿಗೆ ವಿವರಿಸಿ ಹೇಳಿದ.

"ಎಂಥ ಕಟುಕ ಮನಸ್ಸು." ತೊಡೆಯ ಮೇಲೆ ಮಗುವನ್ನು ಮಲಗಿಸಿಕೊಂಡು ಅದನ್ನು ಎವೆಯಿಕ್ಕದೆ ನೋಡುತ್ತಾ ಮಲ್ಲಮ್ಮ ಉಸುರಿದಳು. "ಹಸುಗೂಸೀನ ಅಡವೀಲಿ ಬಿಡೋಕೆ ಕೈಬಂತಲ್ಲ! ಅವ್ರ ಕೈ ಸೇದ್ಹೋಗ!" ಎಂದು ನುಡಿದಳು.

"ಅವ್ರು ಮಾಡ್ದ ಪಾಪಕ್ಕೆ ದೇವ್ರೇ ಶಿಕ್ಷೆ ಕೊಟ್ನಲ್ಲ".

"ಯಾವ ಜಾತಿ ಕೂಸೋ?"

"ಯಾರೋ ಜಾಗೀರ್ದಾರ್ರ, ದೊಡ್ಡವ್ರ ಕೂಸೇ ಇರ್ಬೇಕು. ಈ ಬಂಗಾರ್ದ ಬಳೆ, ನಗ, ಪಟ್ಟೆಯರಿವೆ ನೋಡಿದ್ರೆ ಅನೂಕೂಲ್ವಂತ್ರೂಂತ ಕಾಣ್ತೆ." ಲಿಂಗಯ್ಯ ಮಾರ್ನುಡಿದ: "ನಮ್ಮ ನರ್ಸಣ್ಣನ ಕರಸ್ಕೊಂಡ ದೇವ್ರು ಈ ಹೆಣ್ಕೂಸಿನ ರೂಪ್ದಲ್ಲಿ ನರ್ಸಣ್ಣನ ನಂಬಳಿಗೆ ಮರಳಿ ಕಳಿಸವ್ನೆ. ದೇವ್ರು ಕೊಟ್ಟ ಮಗೂನ ನಂಕೂಸೂಂತ ತಿಳಿದು ಜೋಪಾನ ಮಾಡಾನ."

ಮಲ್ಲಮ್ಮ ಪತಿಯ ಮಾತಿಗೆ ಪ್ರತಿ ಹೇಳಲಿಲ್ಲ. ಅವಳು "ನಂಗುಡಿಸ್ಲು ಬೆಳಗೂವಂಥ ಹಣತೀನ ದೇವ್ರು ಕೊಟ್ಟ" ಎಂದು ನುಡಿದಳು.

ಅಂದು ಲಿಂಗಯ್ಯ ಮಲ್ಲಮ್ಮರ ಸಡಗರವನ್ನು ಹೇಳತೀರದು. ನೆರೆಮನೆಯಿಂದ ಒಂದು ಹಳೆಯ ತೊಟ್ಟಿಲನ್ನು ತಂದು ಅವರು ಕಟ್ಟಿದರು. ಮಲ್ಲಮ್ಮ ಹಳೆಯ ಸೀರೆಗಳನ್ನು ಹೊಲಿದು ಹಚ್ಚಡ ಮಾಡಿದಳು. ಅವಳು ತೊಟ್ಟಿಲಲ್ಲಿ ಶಿಶುವನ್ನು ಮಲಗಿಸಿ ಹಚ್ಚಡ ಹೊದಿಸಿ ಜೋಗುಳ ಹಾಡುತ್ತಾ ತೂಗಿ ನಿದ್ದೆ ಮಾಡಿಸಿದಳು.

ರಾತ್ರಿ ಊಟಮಾಡುವ ಹೊತ್ತಿನಲ್ಲಿ ಮಲ್ಲಮ್ಮ "ನಂಕೂಸಿಂಗೆ ಏನ್ ಹೆಸರಿಡಾನ?" ಎಂದು ಪತಿಯನ್ನು ಪ್ರಶ್ನಿಸಿದಳು. ಒಂದು ದಿನ ಕಳೆಯುವ ಮುನ್ನ ಆ ಅನಾಥ ಶಿಶು ಮಲ್ಲಮ್ಮನಿಗೆ "ನಂಕೂಸಾಗಿ" ಹೋಗಿತ್ತು!

"ನಿನ್ಗೆ ಒಪ್ಪೋ ಹೆಸ್ರನ್ನ ಇಟ್ಟರಾಯಿತು. ನೀನು ಯಾವ ಹೆಸ್ರು

ಹಾಕಿದ್ರೂ ನಗ್ಗ ವೆ.ಚ್ಗ್ನೇನ್ರೇ" ಎಂದು ಲಿಂಗಯ್ಯ ತನ್ನ ಅಭಿಪ್ರಾಯವನ್ನು ಸೂಚಿಸಿದ. ಗಂಡ ಹೆಂಡಿರು ಮಾತಾಡಿ ಮಗುವಿಗೆ "ಮಂಜಕ್ಕ"ನೆಂದು ನಾಮಕರಣಮಾಡಿದರು.

ದಿನಗಳು ನಾಲ್ಕೈದು ಸಾಗಿದುವು. ಒಂದು ದಿನ ಲಿಂಗಯ್ಯ ಮಡದಿಯನ್ನು ಕರೆದು "ನೋಡು ಮಲ್ಲಿ, ನಾವು ಈ ಊರುಬಿಟ್ಟು ಬೇರೆ ಊರಿಗೆ ಹೊರಟು ಹೋಗೋಣ" ಎಂದು ಹೇಳಿದ.

"ಯಾಕೆ ಇಲ್ಲೇ ಇದ್ರೆ ಏನಾಗ್ತೈತೆ? ಎಂದು ಮಲ್ಲಮ್ಮ ನಡುವೆ ಬಾಯಿ ಹಾಕಿದಳು.

"ಆ ಕೂಸಿಂದು ಬಂಗಾರೈತೀಂತ ಊರ ಜನಕ್ಕೆ ತಿಳಿದ್ರೆ ಇಲ್ಲಿದ್ದ ಗವುಜಿ ಎಬ್ಬಿಸ್ತಾವ್ರೆ. ಇಲ್ಲಿಂದ ತೆಂಕಲಾಗಿ ಹೋಗಿ ಉಡ್ಪಿ ಪೇಟೇಲಿ ಬಂಗಾರ್ದ ತಳಿಗೆ ಮಾರೋಣ. ಎರಡು ಜತೆ ಎತ್ತಿನ ಗದ್ದೆ ವಸೀ ನೆಲಾನ ಕ್ರಯಕ್ಕೆ ಪಡ್ಕೊಂಡು ಸ್ವಂತ ಬೇಸಾಯ ಮಾಡಾಣ. ಉಳ್ದ ಬಂಗಾರ ಕೂಸಿಗೆ ಮದ್ವೆ ಹೊತ್ನಾಗೆ ಬಳುವಳಿ ಕೊಡೋಕೆ ತೆಗ್ದು ಇಡಾಣ." ಎಂದು ಲಿಂಗಯ್ಯ ತನ್ನ ಹಂಚಿಕೆಯನ್ನು ಮಡದಿಯ ಮುಂದೆ ಬಿಚ್ಚಿದ.

ಗಂಡನ ಸೂಚನೆ ಮಲ್ಲಮ್ಮನಿಗೆ ಒಪ್ಪಿಗೆಯಾಯಿತು. ಬಂಗಾರಕಟ್ಟೆ, ಅವರ ಹುಟ್ಟೂರೇನೂ ಅಲ್ಲ. ಅವರು ಅಲ್ಲಿ ಬಂದು ಎರಡುಮೂರು ವರ್ಷಗಳು ಆಗಿದ್ದುವು, ಅಷ್ಟೆ. ಆದುದರಿಂದ ಆ ಊರನ್ನು ಬಿಟ್ಟುಹೋಗಲು ಅವರಿಗೆ ಬೇಸರವೆನಿಸಿರಲಿಲ್ಲ.

ಪೈರಿನ ಕುಯ್ಲು ಆದೊಡನೆ ಲಿಂಗಯ್ಯ ಧನಿಗೆ ಗೇಣಿ ಕೊಟ್ಟ. ದನಕರುಗಳನ್ನು ಮಾರಿ ಮಡದಿಯೊಡನೆ ಉಡುಪಿಗೆ ಹೋದ. ಅಲ್ಲಿ ಅವರು ಚಿನಿವಾರರಿಗೆ ಬಂಗಾರದ ತಳಿಗೆಯನ್ನು ತೋರಿಸಿ, ಅದನ್ನು ನೂರು ವರಹಗಳಿಗೆ ಮಾರಿದರು.

ಅನಂತರ ದಂಪತಿಗಳು ಕಲ್ಲೂರನ್ನು ಸೇರಿದರು. ಲಿಂಗಯ್ಯ ಅರುವತ್ತು ವರಹಗಳನ್ನು ಕೊಟ್ಟು ಎರಡು ಜೋಡಿಯ ಗದ್ದೆಯನ್ನು ಕೊಂಡುಕೊಂಡ. ಮನೆಯನ್ನು ಮಾಡಿದ. ಬೇಸಾಯಕ್ಕೆ ಬೇಕಾದ ಎತ್ತುಗಳನ್ನೂ, ಇತರ ಉಪಕರಣಗಳನ್ನೂ ಕ್ರಯಕೊಟ್ಟು ಪಡೆದುಕೊಂಡ.

ಹೀಗೆ ಲಿಂಗಯ್ಯ ಮಲ್ಲಮ್ಮರು ಕಲ್ಲೂರಿನಲ್ಲಿ ಹೊಸ ಸಂಸಾರ ಹೂಡಿದರು. ಆ ದಂಪತಿಗಳಿಗೆ ಬೇಸಾಯ ಮನೆಗೆಲಸಗಳು ಹಿಂದಿನಂತೆ ಬೇಸರಿಕೆಯ ಕಲಸಗಳಾಗಿರಲಿಲ್ಲ. ಅವರ ಬಾಳುವೆಯಲ್ಲಿ ಹರುಷದ ಹೂಬಿಸಿಲನ್ನು ಹರಡಲು, ಸಂತಸದ ಹಾಲನ್ನು ಮಳೆಗರೆಯಲು ಪುಟ್ಟ ಮಂಜುವಿದ್ದಳು.

---

# ಹನ್ನೊಂದು

ಈಗ ಲಿಂಗಯ್ಯ ಕಲ್ಲೂರನ್ನು ಸೇರಿ ಹದಿನೈದು ವರ್ಷಗಳಾಗಿವೆ. ಮಂಜು ಲಿಂಗಯ್ಯನ ಮನೆಯನ್ನು ಸೇರಿದಂದಿನಿಂದ ಅವನ ಭಾಗ್ಯ ಹೆಚ್ಚುತ್ತಾ ಬಂದಿದೆ. ಈಗ ಅವನಿಗೆ ನಾಲ್ಕಾರು ಜೋಡಿಗಳ ಗದ್ದೆ ಇದೆ. ಇಪ್ಪತ್ತು ಮೂವತ್ತು ನಡೆ ದನಕರುಗಳು ಅವನಿಗೆ ಇವೆ. ಬಂಗಾರದ ನಗಗಳು ಮಲ್ಲಮ್ಮನ ಮೈಯನ್ನು ಅಲಂಕರಿಸಿವೆ. ಅವನೀಗ ಊರ ಜನರ ದೃಷ್ಟಿಯನ್ನು ಸೆಳೆಯುವ ಗಣ್ಯ ವ್ಯಕ್ತಿಯಾಗಿದ್ದಾನೆ. ಊರ ಪಂಚರಲ್ಲಿ ಒಬ್ಬನಾಗಿದ್ದಾನೆ.

ಹಿಂದೆ ಅನಾಥ ಶಿಶುವಾಗಿ ಲಿಂಗಯ್ಯನ ಗುಡಿಸಿಲನ್ನು ಸೇರಿದ ಎಳೆಯ ಹಸುಳೆ ಈಗ ಮಂಜಕ್ಕನಾಗಿ ಊರ ತರುಣರ ದೃಷ್ಟಿಯನ್ನು ಸೆಳೆಯುವ ಸುಂದರ ಕನ್ಯೆಯಾಗಿದ್ದಾಳೆ. ವಸಂತಋತು ಕಾಡಿನ ಗಿಡಬಳ್ಳಿಗಳಿಗೆ ತಳಿರು ಮುಗುಳುಗಳನ್ನು ನೀಡಿ ಕಾಡನ್ನು ಚೆಲುವಿನ ಹೂದೋಟವಾಗಿಸುವಂತೆ, ಅವಳಲ್ಲಿ ಅಡಿಯಿರಿಸಿದ ಯೌವನ ಅವಳ ಅಂಗಾಂಗಗಳಿಗೆ ನೂತನ ಬಣ್ಣ ವನ್ನು ಬಳಿದು, ಆಕೆಯ ಚೆಲುವನ್ನು ಇಮ್ಮಡಿಸಿದೆ. ಶಿಲ್ಪಿಯು ಹಾಲುಗಲ್ಲಿನಿಂದ ಕೆತ್ತಿದ ಪುತ್ತಳಿಯಂತೆ ಅವಳೀಗ ತೋರುತಿದ್ದಾಳೆ. ಅವಳ ನಡೆ, ನುಡಿ, ನಿಲವುಗಳಲ್ಲಿ ಹೊಸತೊಂದು ಕಾಂತಿ ಎದ್ದು ತೋರುತ್ತಲಿದೆ.

ಲಿಂಗಯ್ಯ ಮಲ್ಲಮ್ಮರ ಮನೆಯಲ್ಲಿ ಮಂಜಕ್ಕ ಮಮತೆಯ ಕೂಸಾಗಿ ಬಳೆದಳು. ಅವಳ ಮೊದಲ ನುಡಿಗಳು ಮಕ್ಕಳಿಲ್ಲದ ಆ ದಂಪತಿಗಳ ಹೃದಯದ ಅಳಲನ್ನು ತಣಿಸಿದುವು, ಅವಳ ಬಾಲ್ಯ ವಿನೋದಗಳು ಅವರ ಎದೆಗಳನ್ನು ಹಿಗ್ಗಿಸಿದುವು. ಅವಳಿಗೊದಗಿದ ಶೀತ ತಲೆ ನೋವುಗಳು ಅವರನ್ನು ಚಿಂತೆಗೀಡುಮಾಡಿದುವು. ಮಗುವಿನ ಜ್ವರ ಗುಣವಾಗಲೆಂದು ಊರ ದೇವರಿಗೆ ಹರಕೆಯನ್ನು ಹೊರುವರು; ಜೋಯಿಸರು ಮಂತ್ರಿಸಿ ಕೊಟ್ಟ ಭಸ್ಮವನ್ನು ಶಿಶುವಿನ ಹಣೆಗೆ ಹಚ್ಚುವರು; ತಾಯಿತವನ್ನು ಕಟ್ಟುವರು; ಮಗು ಕಾಡಿದುದನ್ನು ಅವರು ಇಲ್ಲವೆನ್ನುತ್ತಿರಲಿಲ್ಲ. ಅದರ ಕೋರಿಕೆಗಳನ್ನು ಅಲ್ಲಗಳೆಯುತ್ತಿರಲಿಲ್ಲ. ಅದರ ಮೊಗವನ್ನು ಕವಿದ ಮೋಡ ಮಲ್ಲಮ್ಮನ ಹರುಷವನ್ನು ಇಲ್ಲವಾಗಿಸುವುದು. ಮಗುವಿನ ಹರುಷ ಸಂತಸಗಳನ್ನು ರಕ್ಷಿಸಲು ಮಲ್ಲಮ್ಮ ತನ್ನ ಜೀವವನ್ನು ಮೀಸಲಾಗಿರಿಸುವಳು.

ವರ್ಷಗಳು ಉರುಳಿದುವು. ಮಂಜಕ್ಕ ಎಂಟು ಹತ್ತು ವರ್ಷಗಳ

ಬಾಲಿಕೆಯಾದಳು. ಊರ ದೇಗುಲದಲ್ಲಿ ಐಗಳ ಮಠವಿತ್ತು. ಹಳ್ಳಿಯ ಬಾಲಕ ಬಾಲಿಕೆಯರೊಡನೆ ಮಂಜಕ್ಕ ಅಲ್ಲಿಗೆ ಹೋಗಿ ಅಕ್ಷರಾಭ್ಯಾಸ ಮಾಡ ತೊಡಗಿದಳು. ದೇಗುಲದ ಮುಂದಿರುವ ಪ್ರಾಂಗಣವೇ ಅವರ ಸಾಲೆ. ಐಗಳು ಹರಡಿದ ಮರಳಲ್ಲಿ ಓನಾಮವನ್ನು ಹಾಕಿಕೊಡುತಿದ್ದರು. ಶಿಷ್ಯರು ಅದನ್ನು ನೋಡಿ ತಿದ್ದುತಿದ್ದರು; ಗುರುಗಳು ಹಾಕಿಕೊಟ್ಟ ಅಕ್ಷರಗಳನ್ನು ಕಲಿಯುತ್ತಿದ್ದರು. ಮಂಜಕ್ಕ ಇತರರಿಗಿಂತಲೂ ಮುಂದಾಗಿ ಐಗಳು ಹಾಕಿ ಕೊಟ್ಟ ವರ್ಣಮಾಲೆಯನ್ನು ಕಲಿತಳು. ಇದನ್ನು ಕಂಡು ಐಗಳಿಗೆ ಬಹಳ ಆಶ್ಚರ್ಯವಾಯಿತು. "ಹೆಣ್ಣಾದರೂ ಬಹು ಚುರುಕು ಬುದ್ಧಿಯವಳು." ಎಂದು ಅವರು ಮಂಜಕ್ಕನನ್ನು ಹೊಗಳಿದರು." ಅಕ್ಷರಗಳನ್ನು ಕಲಿತಾದ ಮೇಲೆ ಅವಳು ಹಲಗೆ ಬಳಪಗಳನ್ನು ಹಿಡಿದು ಬರಹ ಕಲಿಯಲಾರಂಭಿಸಿ ದಳು. ಐಗಳು ಹೇಳಿಕೊಡುತಿದ್ದ ಪುರಾಣ ಕತೆಗಳು ಅವಳ ಎದೆಯನ್ನು ಹಿಗ್ಗಿಸುತಿದ್ದುವು. ಕಥಾ ಪಾತ್ರಗಳು ಅನುಭವಿಸುತಿದ್ದ ಸುಖದುಃಖಗಳು ತನ್ನ ಸುಖದುಃಖಗಳೆಂದು ಭಾವಿಸುತಿದ್ದಳು; ರಾಮನು ತಂದೆಯ ಮಾತಿಗೆ ಕಟ್ಟುಬಿದ್ದು ಕಾಡಿಗೆ ತೆರಳಬೇಕಾದ ಸಂದರ್ಭ ಒದಗಿದಾಗ ಅವಳು ಕೌಸಲ್ಯೆ ಯೊಡನೆ ತಾನೂ ಕಣ್ಣೀರು ಸುರಿಸಿದಳು; ಭರತನ ಭ್ರಾತೃಪ್ರೇಮವನ್ನು ಕಂಡು ತಾನೂ ಲಕ್ಷ್ಮಣನ ಸಂಗಡ ಸಂತಸ ತಾಳಿದಳು; ರಾಮನು ಮರೆಯಲ್ಲಿ ನಿಂತು ವಾಲಿಯನ್ನು ಹೊಡೆದಾಗ, "ದೇವರಾದ ರಾಮನು ಈ ಅನ್ಯಾಯದ ಕೆಲಸವನ್ನು ಮಾಡಬಹುದೇ?" ಎಂದು ಪ್ರಶ್ನಿಸಿದಳು. ಯಾವನೋ ಒಬ್ಬ ಅಗಸನ ಮಾತನ್ನು ಕೇಳಿ ರಾಮನು ಸೀತೆಯನ್ನು ಅರಣ್ಯಕ್ಕೆ ಅಟ್ಟಿದಾಗ, "ಸೀತೆಯನ್ನು ಕಾಡಿಗೆ ಕಳುಹುವುದೇ? ಅದು ಅವನ ಉದ್ದೇಶವಾಗಿದ್ದರೆ ಅವಳನ್ನೇಕೆ ಲಂಕೆಯಿಂದ ಕರೆದುಕೊಂಡು ಬಂದ?" ಎಂಬ ಉದ್ಗಾರವೆತ್ತಿ ದಳು. ಅವಳು ಸೀತೆ ಅನುಭವಿಸಿದ ಬವಣೆಗಳನ್ನು ತನ್ನವೆಂದು ಭಾವಿಸಿ ಕಣ್ಣೀರು ಸುರಿಸಿದಳು.

ಹೀಗೆ ಮಂಜಕ್ಕನ ಓದು ಸಾಕಿತು. ಮೂರು ನಾಲ್ಕು ವರ್ಷಗಳ ಕಾಲ ಓದು ಬರಹಗಳನ್ನು ಕಲಿತು ಅವಳು ಜಾಣೆಯಾದಳು. ಅವಳ ಮೈ ಕೈಗಳಲ್ಲಿ ಯೌವನ ತುಂಬ ತೊಡಗಿತು; ಆಕೆಯ ಮೊಗಕ್ಕೆ ಹೊಸ ಕಾಂತಿ ಯನ್ನು ಬಿಳಿಯು ತೊಡಗಿತು; ಆಕೆಯ ಮೈ ಕೈಗಳಿಗೆ ಚೆಲುವನ್ನು ನೀಡಿತು. ನಕ್ಷತ್ರಗಳಂತೆ ಬೆಳಗುವ ಆಕೆಯ ಕಣ್ಣುಗಳು ಜನರ ಚಿತ್ತಗಳನ್ನು ಸೆಳೆಯು

ತೊಡಗಿದುವು. ತುಂಬಿದ ಗಲ್ಲಗಳು ಕಿತ್ತಳೆಯ ಬಣ್ಣವನ್ನು ತಳೆದುವು. ಹೀಗೆ ಮಂಜಕ್ಕ ಚೆಲುವೆಯಾಗಿ ಬೆಳಗ ತೊಡಗಿದಳು.

ಮಂಜಕ್ಕನ ಮೈಯ ಚೆಲುವು ಹೆಚ್ಚಿದಂತೆ, ಅವಳ ಅಂತರಂಗದ ಸೌಂದರ್ಯವೂ ವಿಕಾಸ ಹೊಂದತೊಡಗಿತು. ಆಕೆ ಎಂದೂ ಕಿನಿಸು ಮಾತನ್ನು ನುಡಿವವಳಲ್ಲ. ಅವಳು ಯಾರಿಗೂ ಕೆಡುನುಡಿಯಳು; ನೊಂದವರನ್ನು, ದೀನರನ್ನು ಕಂಡಾಗ ಅವಳು ಮರುಕದಿಂದ "ಅಯ್ಯೋ," ಎಂಬ ಉದ್ಗಾರವನ್ನು ಎತ್ತುವಳು; ಅನ್ಯರ ಸಂಕಟಗಳನ್ನು ಕಂಡಾಗ, ಅವು ತನ್ನವೆಂದು ತಿಳಿದು ಅವುಗಳನ್ನು ಇಲ್ಲವಾಗಿಸಲು ನೆರವಾಗುವಳು; ತನ್ನ ವಯಸ್ಸಿಗೆ ಮೀರಿದ ದೊಡ್ಡ ಮಾತುಗಳನ್ನು ಆಡುವಳು. ಗೆಳತಿಯವರೊಡನೆ ಪಗಡೆಯಾಡುವಾಗಲೂ ಅವಳು ಕಲಹಿಸಿದವಳಲ್ಲ. ಜಗಳವಾಡಿ ಆಟವನ್ನು ಗೆಲ್ಲುವುದಕ್ಕಿಂತಲೂ ಸೋಲುವುದು ಮೇಲೆಂದು ಅವಳು ಭಾವಿಸುವಳು. ಊರ ಜನರು ಮಂಜಕ್ಕನ ಗುಣಗಳನ್ನು ಕಂಡು, "ಈ ಹೆಣ್ಣನ್ನು ಮದುವೆಯಾಗುವವನು ಅದೃಷ್ಟವಂತ." ಎಂದು ನುಡಿಯುತ್ತಿದ್ದರು. ಗಂಡು ಮಕ್ಕಳಿರುವ ತಾಯಂದಿರು ಮಲ್ಲಮ್ಮನೊಡನೆ ಮಾತಾಡಿ ತಮ್ಮ ಮಗನಿಗೆ ಮಗಳನ್ನು ಕೊಡಲು ಅವಳನ್ನು ಒಪ್ಪಿಸಬೇಕೆಂದು ಆಲೋಚಿಸತೊಡಗಿದರು.

ಮಂಜಕ್ಕನ ಮದುವೆಯ ಆಲೋಚನೆ ಆಗಾಗ ಲಿಂಗಯ್ಯ ಮಲ್ಲಮ್ಮರ ಚಿತ್ತಗಳಲ್ಲಿ ಸುಳಿಯುತ್ತಿದ್ದಿತು. ಮಲ್ಲಮ್ಮ "ಹುಡುಗಿ ಬೆಳೀತಾ ಬತ್ತಾವ್ಳೆ. ಆಕೀಗೆ ಗಂಡ್ನ ಹುಡ್ಕ್ಕ ಬೇಡ್ವಾ?" ಎಂದು ಪತಿಯನ್ನು ಪ್ರಶ್ನಿಸಿದಳು.

"ಮಂಜೀಗೆ ಗಂಡಿನ ಹುಡ್ಕೋ ಅಷ್ಟು ಪಿರಾಯ ಆಗೈತ? ನಿನ್ನೆ ಮೊನ್ನೆನ ಹುಡ್ಗಿ ಅಲ್ವಾ ಅದು? ನಾಕು ದಿನ ಆಡ್ಕೊಂಡು ಸಂತಸದಲ್ಲಿರ್ಲಿ." ಎಂದು ಲಿಂಗಯ್ಯ ಮಡದಿಗೆ ಪಡಿನುಡಿದ.

ಮಗಳಿಗೆ ಬೇಗನೆ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿ ಕೊಡಲು ಮಲ್ಲಮ್ಮನಿಗೂ ಇಷ್ಟವಿರಲಿಲ್ಲ. ಈಗ ಮಂಜಕ್ಕ ಅವಳ ಬಾಳುವೆಯ ಸರ್ವಸ್ವವಾಗಿದ್ದಳು. ಮಗಳನ್ನು ಬಿಟ್ಟು ಈಗ ಅವಳು ಇರಲಾರಳು. ಮದುವೆಯಾದಾಗ ಮಗಳು ತನ್ನಿಂದ ಅಗಲುವಳು ಎಂಬ ಚಿಂತೆ ಎಷ್ಟೋ ಇರುಳು ಅವಳಿಗೆ ನಿದ್ದೆ ಇಲ್ಲದಂತೆ ಮಾಡುತ್ತಿದ್ದಿತು. ಒಂದು ದಿನ ಅವಳು ಪತಿಯನ್ನು "ನಮ್ಮ ಮಂಜೀನ ಮದ್ವೆ ಮಾಡಿ ಕೊಟ್ರೆ ಗಂಡನ್ನ ಮನೆಗೆ ಕಳುಹಿಸಬೇಡ್ವಾ?" ಎಂದು ಪ್ರಶ್ನಿಸಿದಳು.

ಮಡದಿಯ ಪ್ರಶ್ನೆಯಲ್ಲಿ ಅಡಕವಾದ ವ್ಯಥೆಯನ್ನು ಲಿಂಗಯ್ಯ ಬಲ್ಲ. ಅವನು "ಮಲ್ಲೀ, ನೀನು ಯಾಕೆ ಚಿಂತೆ ಹಚ್ಚಿ ಕೊಳ್ತೀ. ಮಂಜು ಒಪ್ಪೋ ಒಬ್ಬ ಬಡ ಹೈದಂಗೆ ಮದ್ವೆ ಮಾಡಿಕೊಟ್ರಾತು. ಮೇಲಿರೋ ಸೋಮಿ ನಮ್ಗೆ ಏನೂ ಕಡಿಮೆ ಮಾಡಿಲ್ಲ. ಬೇರೆ ಗಂಡು ಹೈಕಳು ನಮ್ಗೆ ಐತಾವ? ಮಂಜೀ ಗಂಡ ನಮ್ಮನೇಲಿ ಇರ್ತಾನೆ." ಎಂದು ಉತ್ತರಿಸಿದ.

ಗಂಡನ ಉತ್ತರದಿಂದ ಮಲ್ಲಮ್ಮನಿಗೆ ಸಮಾಧಾನವಾಯಿತು. ಮಂಜಕ್ಕ ಮದುವೆಯಾದ ನಂತರ ಅಳಿಯನೂ ತಮ್ಮ ಮನೆಯಲ್ಲೇ ಇರುವಂತಾದರೆ ತಾನು ಮಂಜಕ್ಕನಿಂದ ಅಗಲಬೇಕಾದುದಿಲ್ಲ; ತಾನು ಮಂಜಕ್ಕನನ್ನು ಎತ್ತಿ ಆಡಿಸಿದಂತೆಯೇ ಆಕೆಯ ಮಕ್ಕಳನ್ನು ಎತ್ತಿ ಆಡಿಸಬಹುದು; ಎಂಬ ಆಲೋಚನೆ ಅವಳ ಚಿತ್ತವನ್ನು ಮುಸುಕಿದ್ದ ಮಂಜನ್ನು ಕರಗಿ ನೀರಾಗಿಸಿತು.

ಆದರೆ ಮಗಳ ಮದುವೆಯನ್ನು ನೋಡುವ ಭಾಗ್ಯಮಲ್ಲಮ್ಮನಿಗಿರಲಿಲ್ಲ. ಒಂದು ದಿನ ಗದ್ದೆಯಲ್ಲಿ ನೇಜಿ ನೆಡಲೆಂದು ಅವಳು ಹೋದಳು. ಆಗ ಒಂದು ದೊಡ್ಡ ಮಳೆ ಬಂತು. ಅವಳು ಮಳೆಯನ್ನು ಲಕ್ಷಿಸದೆ ಕೆಲಸವನ್ನು ಮುಂದುವರಿಸಿದಳು. ಮಲ್ಲಮ್ಮ ಹಿಂದೆ ಎಷ್ಟೋ ಮಳೆಗಳನ್ನು ನೋಡಿದ್ದಳೆಂಬುದು ನಿಜ. ಆದರೆ ಈ ಮಳೆ ಹಿಂದಿನ ಮಳೆಯಂತಿರಲಿಲ್ಲ. ಒಂದು ಗಳಿಗೆಯ ಮಳೆ ಅವಳ ಮೈಯನ್ನೆಲ್ಲಾ ತೊಯ್ಸಿತು; ಚಳಿಯಿಂದ ಅವಳ ಮೈಯನ್ನು ಗಡಗಡನೆ ನಡುಗಿಸಿತು. ಮಳೆಯನ್ನು ತಡೆಯಲಾಗದೆ ಅವಳು ಮನೆಗೆ ಮರಳಿದಳು. ಮರುದಿನ ಅವಳಿಗೆ ಶೀತ ಹಿಡಿಯಿತು. ಅದನ್ನು ಚಳಿ ಜ್ವರ ಹಿಂಬಾಲಿಸಿತು. ಅವಳು ಹಾಸಿಗೆಯನ್ನು ಹಿಡಿದಳು. ಅವಳನ್ನು ಉಪಚರಿಸುವ ಗೈಮೆ ಮಂಜಕ್ಕನದಾಯಿತು. ಊರ ವೈದ್ಯರು ನಾರು ಬೇರುಗಳ ಕಷಾಯವನ್ನು ಮಾಡಿಕೊಟ್ಟರು. ಆದರೆ ಕಷಾಯದ ಪ್ರಭಾವಕ್ಕೆ ಜ್ವರ ತಗ್ಗಲಿಲ್ಲ; ಶೀತ ಆರಲಿಲ್ಲ. ಜ್ವರದೊಡನೆ ಎದೆನೋವು ಅವಳನ್ನು ಬಾಧಿಸಿತು. ವೈದ್ಯರು ಆಕೆಯ ರೋಗವನ್ನು ಪರಿಹರಿಸಲು ಕೈಲಾದಷ್ಟು ಪ್ರಯತ್ನಿಸಿದರು. ಆದರೆ ರೋಗ ಬಾಧೆ ಉಲ್ಬಣವಾಗುತ್ತಾ ಹೋಯಿತು.

ಒಂದಿರುಳು ಮಲ್ಲಮ್ಮ ಪತಿಯ ತೊಡೆಯ ಮೇಲೆ ತಲೆಯನ್ನಿರಿಸಿ, ಮಂಜಕ್ಕನನ್ನು ಕಣ್ತುಂಬ ನೋಡಿ, ಕಣ್ಣುಗಳನ್ನು ಮುಚ್ಚಿದಳು; ಮುಚ್ಚಿದ ಕಣ್ಣುಗಳನ್ನು ಅವಳು ಮರಳಿ ತೆರೆಯಲಿಲ್ಲ. ಅವಳು ಮರಳಿ ಬಾರದ ನಾಡಿಗೆ ತೆರಳಿದಳು. ಲಿಂಗಯ್ಯ ಬಾಳ್ವೆಯ ಒಡನಾಡಿಯನ್ನು ಕಳೆದುಕೊಂಡ. ಮಂಜಕ್ಕ ಸಾಕು ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದಳು.

ತಾಯಿಯಿಲ್ಲದ ಮಂಜಕ್ಕನಿಗೆ ಈಗ ಲಿಂಗಯ್ಯ ತಂದೆಯೂ ತಾಯಿಯೂ ಆದ. ಮಲ್ಲಮ್ಮನ ಪ್ರೀತಿಯ ಸಿಹಿ ಹಾಲು ಮಂಜಕ್ಕನ ಪಾಲಿಗೆ ಇಲ್ಲವಾದರೂ ಲಿಂಗಯ್ಯನೆರೆಯುತಿದ್ದ ಶೀತಲ ಸ್ವಾದೋದಕ ಮಂಜಕ್ಕನ ಮನದಳಲ ಬೆಂಕಿಯನ್ನು ಆರಿಸುತಿದ್ದಿತು.

ಲಿಂಗಯ್ಯನ ಮನೆಗೆಲಸವನ್ನು ಈಗ ಮಂಜಕ್ಕ ಕೈಕೊಂಡಳು. ಆಕೆ ಮನೆಯನ್ನು ಗುಡಿಸಿ ಸಾರಿಸಿ ಓರಣವಾಗಿರಿಸುತಿದ್ದಳು. ಮುದುಕ ತಂದೆಗೆ ಹೊತ್ತಿಗೆ ಸರಿಯಾಗಿ ಉಣಿಸು ತಿನಿಸುಗಳನ್ನು ಅಟ್ಟು ಬಡಿಸುತಿದ್ದಳು. ಹಟ್ಟಿಯಲ್ಲಿ ತುಂಬಿದ ತುರುಗಳ ಆರೈಕೆಯನ್ನೂ ಅವಳೇ ನೋಡಿಕೊಳ್ಳುತಿದ್ದಳು. ಮಂಜಕ್ಕ ತಂದೆಯ ಬಾಳ್ವೆಯ ಸಂಜೆಯಲ್ಲಿ ಹೂ ಬಿಸಿಲಿನಂತೆ ಕಂಗೊಳಿಸುತಿದ್ದಳು.

---

## ಹನ್ನೆರಡು

ಅದೊಂದು ದಿನ ಹಗಲು ಮೂರನೆಯ ಜಾವ ಕಳೆದಿತ್ತು. ಮಂಜಕ್ಕ ನಿತ್ಯದ ಮನೆಗೆಲಸಗಳನ್ನು ಮುಗಿಸಿ, ಬಯಲಲ್ಲಿ ಬಿಟ್ಟ ಕರುಗಳನ್ನು ಅಟ್ಟುತ್ತಾ ಹಟ್ಟಿಗೆ ಮರಳುತಿದ್ದಳು. ತಾನು ಕಲಿತಿದ್ದ ಒಂದು ಹಳ್ಳಿಯ ಹಾಡನ್ನು ಗೊಣಗುತ್ತಾ ಕರುಗಳ ಬೆನ್ನ ಹಿಂದೆ ಬರುತಿದ್ದಳು. ಅವಳು ತನಗೆ ಎದುರಾಗಿ ಒಬ್ಬ ತರುಣನು ಬರುವುದನ್ನು ನೋಡಿದಳು. ಅವನು ಯಾರೆಂಬುದನ್ನು ತಿಳಿಯುವ ಕುತೂಹಲ ಅವಳ ಅಂತರಂಗದಲ್ಲಿ ಉದಿಸಿತು. ಹಾಗೆಯೇ ಅವನನ್ನು ಇನ್ನೊಮ್ಮೆ ಅವಳು ಕಣ್ಣೆತ್ತಿ ನೋಡಿದಳು.

ಕಲ್ಲೂರು ನೂರು ಮನೆಗಳಿರುವ ಒಂದು ಸಣ್ಣ ಹಳ್ಳಿ. ಹಳ್ಳಿಯ ಜನರನ್ನೆಲ್ಲಾ ಮಂಜಕ್ಕ ಬಲ್ಲಳು. ತರುಣರಲ್ಲಿ ಅಧಿಕ ಮಂದಿ ಅವಳೊಡನೆ ಓದುಬರಹ ಕಲಿತವರೇ ಆಗಿದ್ದರು. ಈ ಯುವಕ ಅವರಂತೆ ಇರಲಿಲ್ಲ. ಈಗ ಅವನು ತೀರ ಹತ್ತಿರಕ್ಕೆ ಬಂದಿದ್ದ. ಅವನು ತನ್ನ ಊರಿನವನಲ್ಲ; ಬೇರೊಂದು ಹಳ್ಳಿಯವನೆಂಬುದು ಆಕೆಗೆ ಅರಿವಾಯಿತು; ಅವಳು ಕರು ಹಿಂಡನ್ನು ಅಟ್ಟುತ್ತಾ ಆ ಅಪರಿಚಿತನನ್ನು ದಾಟಿ ಮುಂದೆ ನಡೆದಳು.

ತನ್ನನ್ನು ಮಂಜಕ್ಕ ದಾಟಿ ನಡೆವಾಗ ತರುಣ ನಿಂತ. ಅವಳನ್ನೇ ಒಮ್ಮೆ ದಿಟ್ಟಿಸಿ ನೋಡಿದ. ಅನಂತರ ಅವನು "ತಂಗಿ, ನಿನ್ನ ಮನೆ ಇಲ್ಲಿಂದ ದೂರವೇ?" ಎಂದು ಪ್ರಶ್ನಿಸಿದ.

"ಇಲ್ಲ. ಇಲ್ಲಿ ಸನಿಹದಲ್ಲಿಯೇ ಇದೆ." ಎಂದು ನುಡಿದು ಮಂಜಕ್ಕ ಕೊರಳನ್ನು ತಿರುಗಿಸಿದಳು.

"ನೋಡು, ನಾನು, ನಾಲ್ಕಾರು ಹರದಾರಿಗಳ ದೂರದಿಂದ ನಡೆದು ಕೊಂಡು ಬಂದಿದ್ದೇನೆ." ಆ ತರುಣ ಹೇಳಿದ: "ನನಗೆ ಬಾಯಾರುತ್ತಿದೆ. ಒಂದಿಷ್ಟು ನೀರು ಕೊಡಲಾರೆಯಾ?"

"ಮನೆಗೆ ಬಂದರೆ ಕೊಡುವೆನು." ಎಂದಳು ಮಂಜಕ್ಕ.

ಯುವಕ ಬೆನ್ನು ತಿರುಗಿಸಿ, ಮಂಜಕ್ಕನನ್ನು ಹಿಂಬಾಲಿಸಿದ. ಅವಳು ಮೋರೆ ಅತ್ತ ತಿರುಗಿಸಿ ಯುವಕನ ಮೋರೆಯನ್ನೊಮ್ಮೆ ನೋಡಿದಳು. ಆ ಮೋರೆ ದಣಿವಿನಿಂದ ಕಳೆಗುಂದಿದುದಾದರೂ ಚೆಲುವಾದುದೆಂಬುದನ್ನು ಅವಳು ತಿಳಿದುಕೊಂಡಳು. ಅವನು ತೋಳಲ್ಲಿ ಒಂದು ಬಿಲ್ಲನ್ನು ಸಿಕ್ಕಿಸಿದ್ದ. ಬೆನ್ನ ಹಿಂದೆ ಅಂಬುಗಳು ತುಂಬಿದ ಬತ್ತಳಿಕೆಯಿದ್ದಿತು. ಕೈಯಲ್ಲಿ ಉದ್ದವಾದ ಒಂದು ಈಟಿಯಿತ್ತು. ಆತ ಅರಸನ ದಂಡಿನಲ್ಲಿ ಒಬ್ಬ ಸೈನಿಕನಾಗಿರಬೇಕೆಂದು ಅವಳು ಊಹಿಸಿದಳು.

ಮನೆಯನ್ನು ಅವರು ಸೇರಿದರು. ಮಂಜಕ್ಕ ಹಟ್ಟಿಯೊಳಗೆ ದನಕರು ಗಳನ್ನು ಸೇರಿಸಿ ಬಂದಳು. ಅವಳು ಒಂದು ತಂಬಿಗೆ ನೀರನ್ನು ತಂದು ತರುಣನ ಮುಂದಿರಿಸಿದಳು; "ನೀನು ಮೊದಲು ಕೈಕಾಲು ಮೋರೆಗಳನ್ನು ತೊಳೆದುಕೋ." ಎಂದು ಹೇಳಿ ಒಳಗಿನಿಂದ ಒಂದು ಹಸೆಯನ್ನು ತಂದು ಹಾಸಿದಳು.

ಯುವಕ ತನ್ನಲ್ಲಿದ್ದ ಆಯುಧಗಳನ್ನೆಲ್ಲಾ ಕಳಚಿ ಜಗಲಿಯ ಮೇಲಿರಿಸಿ, ಕೈಕಾಲು ಮೋರೆಗಳನ್ನು ತೊಳೆದುಕೊಂಡು, ಹಾಸಿದ ಹಸೆಯನ್ನು ಸಮೀಪಿಸಿ ದಾಗ, ಅಲ್ಲಿ ಹಾಲು ತುಂಬಿದ ಗಿಂಡಿ, ಕಳಿತ ರಸಬಾಳೆ ಹಣ್ಣುಗಳು ಅವನನ್ನು ಎದುರು ನೋಡುತಿದ್ದುವು. ಅವುಗಳನ್ನು ಕಂಡು ಅವನಿಗೆ ಸೋಜಿಗವಾ ಯಿತು. ಅವನು "ನಾನು ನೀರು ಕೇಳಿದರೆ ಹಾಲು ಹಣ್ಣುಗಳು ಅಣಿಯಾಗಿವೆ ಯಲ್ಲಾ! ನೆಂಟನಿಗೆ ದೊರೆಯುವ ಉಪಚಾರಕ್ಕಿಂತಲೂ ಮಿಗಿಲಾದ ಸತ್ಕಾರ ನಡೆಯುವ ಹಾಗಿದೆ!" ಎಂದು ಮುಗುಳ್ನಗೆಯನ್ನು ಬೀರಿದ.

"ಬಾಯಾರಿ ಬಂದವರಿಗೆ ಬರಿ ನೀರು ಕೊಟ್ಟು ಕಳುಹಿಸಿದರೆ ಅಪ್ಪ ಮುಳಿದಾನು!"

"ನಿನ್ನ ತಂದೆ ಯಾರು?"

"ಲಿಂಗಯ್ಯ. ಅವನ ಹೆಸರು ನೀನು ಕೇಳಿಲ್ಲವೇ? ದೇವನ ಹಳ್ಳಿ ಲಿಂಗಯ್ಯನನ್ನು ಸುತ್ತಲಿನ ನಾಲ್ಕಾರು ಹಳ್ಳಿಗಳ ಜನರೆಲ್ಲರೂ ಬಲ್ಲರು."

"ನಾನು ಈ ಊರಿನವನಲ್ಲ."

"ನಿನ್ನ ಮೊಗ ನೋಡಿದೊಡನೆ ಅದು ನನಗೆ ತಿಳಿಯಿತು. ನಾನು ಮಾತಾಡಿ ನಿನ್ನನ್ನು ತಡೆದೆ. ಹಾಲು ಹಣ್ಣುಗಳನ್ನು ತೆಗೆದುಕೋ." ಎಂದು ಮಂಜಕ್ಕ ಹೇಳಿದಳು.

ತರುಣನಿಗೆ ತುಂಬಾ ನೀರಡಿಕೆಯಾಗಿತ್ತು. ದಾಹದೊಡನೆ ಕ್ಷುದ್ಬಾಧೆಯೂ ಅವನನ್ನು ಪೀಡಿಸುತಿತ್ತು. ಅವನು ಹಣ್ಣುಗಳನ್ನು ತಿಂದ; ಹಾಲನ್ನು ಕುಡಿದ. ಹಣ್ಣು ಹಾಲುಗಳು ಅವನ ಆಯಾಸವನ್ನು ಕಡಿಮೆ ಮಾಡಿದುವು. ಈಗ ಅವನು ತನ್ನಿಂದ ನಾಲ್ಕೆಂಟು ಮಾರುಗಳ ದೂರದಲ್ಲಿ ಕುಳಿತಿದ್ದ ಮಂಜಕ್ಕನನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸತೊಡಗಿದ. ಅವಳ ಬೊಗಸೆಗಣ್ಣುಗಳಲ್ಲಿ ಅವನ ದೃಷ್ಟಿ ಸೆರೆಸಿಕ್ಕಿತು. ಕೆಂಗುಲಾಬಿಯಂತಿದ್ದ ಅವಳ ಮೋರೆ ಅವನ ಚಿತ್ತವನ್ನು ಅಪಹರಿಸಿತು. ನೀಳವಾದ ಅವಳ ಮೂಗು ಸರಳಂತೆ ಅವನ ಬಗೆಯಲ್ಲಿ ನಾಟಿತು. ಅವನು ತುಟಿಗಳನ್ನು ಬಿಚ್ಚದೆ ಮೌನವಾಗಿ ತನ್ನ ಮುಂದಿದ್ದ ಚೆಲುವಿನ ಹೊನಲನ್ನು ಹೀರಿ, ಹೃದಯವನ್ನು ತುಂಬಿ ಕೊಳ್ಳಲು ಹವಣಿಸಿದ.

"ನೀನು ಯಾವ ಊರಿನವನು?" ಮಂಜಕ್ಕ ತರುಣನು ಮಾತಾಡದಿರುವುದನ್ನು ಕಂಡು ಪ್ರಶ್ನಿಸಿದಳು.

"ನನ್ನದು — ನನ್ನದು — ಮಾದರ ಹಳ್ಳಿ." ಎಂದು ತಡವರಿಸುತ್ತಾ ತರುಣನು ಹೇಳಿದ: "ಅದು ಮೂಡಲಲ್ಲಿ ಗಟ್ಟದ ಅಂಚಿನಲ್ಲಿದೆ. ನನ್ನ ಹೆಸರು ಸಂಗಣ್ಣನೆಂದು."

"ನನ್ನನ್ನು ಮಂಜಕ್ಕನೆಂದು ಕರೆಯುವರು." ಮಂಜಕ್ಕ ನುಡಿದಳು: "ನಿನ್ನ ಬಿಲ್ಲಂಬುಗಳನ್ನು ಕಂಡು ನಾನು ನೀನು ಅರಸನ ದಂಡಾಳಿರಬಹುದೆಂದು ಊಹಿಸಿದೆ."

"ನಾನು ಉಡುಪಿಗೆ ಹೊರಟಿದ್ದೇನೆ. ಅಲ್ಲಿ ದೇವರ ದರ್ಶನಮಾಡಿ ಬರಬೇಕೆಂದು ಯಾತ್ರೆ ಕೈಕೊಂಡಿದ್ದೇನೆ. ನಿನ್ನಂತೆಯೇ, ಅನೇಕರಿಗೆ ನನ್ನ ಬಿಲ್ಲಂಬುಗಳು ಮೋಸಮಾಡಿವೆ." ಸಂಗಣ್ಣ ನಗೆ ಬೆರೆತ ದನಿಯಲ್ಲಿ ಮಾತು ಮುಂದುವರಿಸಿದ: "ದಾರಿಯಲ್ಲಿ ಕಳ್ಳಕಾಕರ ಭಯವನ್ನು ಕಳೆಯಲೆಂದು

ಈ ಕೈದುಗಳನ್ನು ಹಿಡಿದೆ. ದಾರಿಯಲ್ಲಿ ಹಳ್ಳಿಯ ಹೆಂಗಸರು ನನ್ನೊಡನೆ ಮಾತಾಡಲು ಅಂಜಿದರು. ನನ್ನೊಡನೆ ದಿಟ್ಟತನದಿಂದ ಮಾತಾಡಿದವರೆಂದರೆ ನೀನೇ ಸರಿ!"

"ನಾನೇಕೆ ಹೆದರಬೇಕು? ದಂಡಾಳೆಂದರೆ ಹುಲಿಯೇ ಅಥವಾ ಕರಡಿಯೇ?"

ಈರ್ವರೂ ಮಾತಾಡುತಿದ್ದಾಗ ತೋಟದ ಕಡೆ ಹೋಗಿದ್ದ ಲಿಂಗಯ್ಯ ಬಂದ. ಮನೆಗೊಬ್ಬ ಅಪರಿಚಿತ ತರುಣ ಬಂದಿರುವುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು. "ಮಂಜೂ, ಇದಾರು ಬಂದವರು?" ಎಂದು ಮಗಳನ್ನು ಕೇಳಿದ.

"ಅಪ್ಪ, ಯಾರೋ ಮೂಡಲು ಕಡೆಯವರಂತೆ. ಉಡುಪಿಗೆ ಯಾತ್ರೆ ಹೊರಟಿರುವರಂತೆ. ಆಸರೆಂದು ನೀರು ಕೇಳಿದರು." ಮಂಜಕ್ಕ ತಂದೆಗೆ ಮಾರ್ನುಡಿದಳು: "ನಾನು ಹಾಲು ಹಣ್ಣುಗಳನ್ನು ಕೊಟ್ಟೆ. ಈಗ ಸ್ವಲ್ಪ ದಣಿವಾರಿಸಿಕೊಳ್ಳುತಿದ್ದಾರೆ."

"ಒಳ್ಳೆಯದಾಯಿತು." ಎಂದು ನುಡಿಯುತ್ತಾ ಲಿಂಗಯ್ಯ ವೀಳ್ಯದೆಲೆಗೆ ಸುಣ್ಣ ಹಚ್ಚಿದ.

"ನಿಮ್ಮ ಮಗಳು ಹಾಲು ಹಣ್ಣುಕೊಟ್ಟು ಉಪಚರಿಸಿದಳು. ನಾನು ಕೃತಜ್ಞನಾಗಿದ್ದೇನೆ." ಎಂದು ಹೇಳಿದ ಸಂಗಣ್ಣ.

"ನಿನ್ನ ಊರು ಯಾವುದು? ಹೆಸರೇನು?" ಎಂದು ಕೇಳಿದ ಲಿಂಗಯ್ಯ. ಸಂಗಣ್ಣ ಮಂಜಕ್ಕನಿಗೆ ಹೇಳಿದ ಉತ್ತರಗಳನ್ನೇ ಲಿಂಗಯ್ಯನಿಗೂ ಹೇಳಿದ.

"ಭೂಮಿ ಕಾಣಿಯಿದೆಯೋ?"

"ಏನೋ ಸ್ವಲ್ಪ ಇದೆ."

"ಎಷ್ಟಿದೆ?"

"ಒಂದು ಹತ್ತು ಜೋಡಿ ಎತ್ತುಗಳ ಗದ್ದೆಯಿದೆ. ಸ್ವಲ್ಪ ತೋಟವಿದೆ." ನಿರಾಸಕ್ತನಂತೆ ಹೇಳಿದ ಸಂಗಣ್ಣ.

"ಹತ್ತು ಜೋಡಿ ಎತ್ತುಗಳ ಗದ್ದೆ ಬಹು ಕಡಿಮೆ ಎಂದು ಮಾತಾಡುವಿಯಲ್ಲ. ನೀನು ತುಂಬಾ ಅನುಕೂಲವಂತನಾಗಿ ಕಾಣುವೆ."

"ಹೊತ್ತು ಬಹಳವಾಯಿತು." ಎಂದು ನುಡಿಯುತ್ತಾ ಸಂಗಣ್ಣ ತನ್ನ ಪಯಣವನ್ನು ಮುಂದುವರಿಸಲು ಅನುವಾದ.

"ಈ ಸಂಜೆ ಹೊತ್ತಿನಲ್ಲಿ ನೀನೆಲ್ಲಿಗೆ ಹೋಗುವಿ? ಹೇಗೂ ಉಡುಪಿಗೆ ತಲುಪಲಾರೆ." ಲಿಂಗಯ್ಯ ಸಂಗಣ್ಣನನ್ನು ತಡೆದ. "ಇಲ್ಲಿಂದ ಉಡುಪಿಗೆ ಎರಡು ದಿನಗಳ ದಾರಿಯಿದೆ."

"ದಾರಿಯಲ್ಲಿ ಯಾವುದಾದರೂ ಒಂದು ಹಳ್ಳಿಯಲ್ಲಿ ತಂಗಿದರಾಯಿತು."

"ಬೇರೊಂದು ಊರಲ್ಲಿ ಉಳಿಯುವವನು ಇಂದು ನಮ್ಮ ಮನೆಯಲ್ಲಿ ಉಳಿದರಾಯಿತು." ಲಿಂಗಯ್ಯ ನುಡಿದ: "ಮುಂಜಾನೆ ಇಲ್ಲಿಂದಲೇ ಹೊರಟರಾಯಿತು."

ಸಂಗಣ್ಣ ಮುದುಕನಿಗೆ ಪಡಿನುಡಿಯಲಿಲ್ಲ. ಅವನು ಮಂಜಕ್ಕನ ಮೋರೆಯನ್ನು ನೋಡಿದ. ಅವಳ ಕಣ್ಣುಗಳು ಅವನ ಮೊಗದಲ್ಲಿ ನೆಲಸಿದ್ದುವು. ಆ ಕಣ್ಣುಗಳು "ನೀನು ಇಲ್ಲಿಯೇ ನಿಲ್ಲು." ಎಂದು ಸಂಗಣ್ಣನನ್ನು ಯಾಚಿಸುವಂತೆ ತೋರಿದುವು. ಆ ದೃಷ್ಟಿಯಲ್ಲಿ ಹುದುಗಿದ ಬೇಡಿಕೆಯನ್ನು ಅಲ್ಲಗಳೆಯುವುದು ಅವನಿಗೆ ಅಸದಳವೆನಿಸಿತು.

"ನೋಡು, ನನಗೆ ಈ ಕಡೆ ಬಂಧು ಬಳಗದವರು ಯಾರೂ ಇಲ್ಲ. ಆದುದರಿಂದ ನನ್ನ ಮನೆಗೆ ಜನರು ಬರುವುದು ಕಡಿಮೆ." ಸಂಗಣ್ಣ ಪ್ರತಿಯಾಡದುದನ್ನು ಕಂಡು ಲಿಂಗಯ್ಯ ಹೇಳಿದ: "ಆದುದರಿಂದ ನಿನ್ನನ್ನು ನಮ್ಮಲ್ಲಿ ಉಳಿದುಕೊ ಎಂದು ಹೇಳುವ ಮನಸ್ಸಾಯಿತು."

ಮುದುಕನ ನಿರ್ಮಲಾಂತಃಕರಣ ಸಂಗಣ್ಣನ ನಿರ್ಧಾರವನ್ನು ಬದಲಾಯಿಸಲು ಕಾರಣವಾಯಿತು. ಅವನು ಕೈಯ್ಯಲ್ಲೆತ್ತಿಕೊಂಡ ಬಿಲ್ಲನ್ನು ನೆಲದ ಮೇಲಿರಿಸಿ, "ಮಾವ, ನಿನ್ನ ಮನಸ್ಸು ನೋಯಿಸುವುದೇಕೆ? ನಾನು ಇಲ್ಲಿಯೇ ಉಳಿಯುವೆನು." ಎಂದು ಹೇಳಿದ.

ಸಂಗಣ್ಣ ತಂದೆಯ ಕೋರಿಕೆಯನ್ನೊಪ್ಪಿದುದನ್ನು ಕಂಡು ಮಂಜಕ್ಕನು ಹಿಗ್ಗಿ ಹೀರೇ ಹೂವಾದಳು. ಲಿಂಗಯ್ಯ ಮಗಳತ್ತ ಕಣ್ಣು ಹೊರಳಿಸಿ, "ನೋಡು ಮಗಳೇ, ನೀರುಮನೆಯಲ್ಲಿ ಒಂದಿಷ್ಟು ಬೆಂಕಿಯುರಿಸು. ಸಂಗಣ್ಣ ನಡೆದು ದಣಿದಿದ್ದಾನೆ. ಅವನು ಬೆಚ್ಚನೆ ಒಂದಿಷ್ಟು ಸ್ನಾನಮಾಡಲಿ. ಹಾಗೆಯೇ ಪಾಯಸವನ್ನೂ ಮಾಡು." ಎಂದು ಸೂಚನೆಕೊಟ್ಟ.

ಮಂಜಕ್ಕ ಮನೆಗೆಲಸಗಳನ್ನು ಮಾಡಲು ಒಳ ತೆರಳಿದಳು. ಲಿಂಗಯ್ಯ ಅತಿಥಿಯೊಡನೆ ಮಾತಾಡುತ್ತಾ ಕುಳಿತ. ಸಂಗಣ್ಣನ ಮನೆ ಮಠ, ಬೇಸಾಯ, ಉತ್ಪತ್ತಿ — ಹೀಗೆ ತನಗೆ ಅಭಿರುಚಿಯಿರುವ ವಿಷಯಗಳನ್ನು ಕುರಿತು

ಮುದುಕ ಮಾತಾಡತೊಡಗಿದ. ಈ ಪ್ರಶ್ನೆಗಳಿಗೆ ಸಂಗಣ್ಣ ಬಹಳ ಜಾಗರೂಕತೆಯಿಂದ ಆಲೋಚನಾಪೂರ್ವಕವಾಗಿ ಉತ್ತರಗಳನ್ನು ಕೊಡತೊಡಗಿದ.

ಸಂಜೆ ಬಂತು. ನೀರುಮನೆಯಲ್ಲಿ ಹಂಡೆಯಲ್ಲಿ ನೀರು ಮರಳುತ್ತಿದ್ದಿತು. ಲಿಂಗಯ್ಯ "ಏಳು ಸಂಗಣ್ಣ, ಒಂದಿಷ್ಟು ಸ್ನಾನ ಮಾಡು. ನೀನು ದಣಿದು ಬಂದಿದ್ದೀಯೆ." ಎಂದು ಹೇಳಿ, ನೀರುಮನೆಗೆ ಕರೆದುಕೊಂಡು ಹೋದ. ಸಂಗಣ್ಣ ಮಿಂದು ಜಗಲಿಗೆ ಮರಳಿದಾಗ, ಮಂಜಕ್ಕ ಅಂಗಳದಲ್ಲಿ ತುಲಸಿಯ ಮುಂದೆ ದೀಪವಿರಿಸಿ ದೇವರ ನಾಮುಗಳನ್ನು ಹಾಡುತ್ತಿದ್ದಳು. ಅವಳ ಕೊರಳುಲಿ ಸಂಗಣ್ಣನ ಕಿವಿಗಳನ್ನು ಸೆಳೆಯಿತು. ಅವಳ ಸ್ವರ ಮೋಹಕವಾಗಿತ್ತು. ಅವನು ಹಾಡನ್ನು ಆಲಿಸುತ್ತಾ ಆನಂದಿಸಿದ.

"ಮಂಜಕ್ಕ ನೀನು ಬಹು ಸೊಗಸಾಗಿ ಹಾಡುತ್ತೀಯೆ." ಹಾಡನ್ನು ಮೆಚ್ಚಿದ ಸಂಗಣ್ಣ ಹೇಳಿದ: "ನಾನು ಆಂ— ಅಲ್ಲ, ಮಾದರ ಹಳ್ಳಿಯಲ್ಲಿ ಇಷ್ಟು ಇಂಪಾದ ಹಾಡನ್ನು ಕೇಳಲಿಲ್ಲ."

ಸಂಗಣ್ಣನ ಪ್ರಶಂಸೆಯನ್ನು ಕೇಳಿ ಮಂಜಕ್ಕನ ತುಟಿಗಳು ಮೃದುಹಾಸದ ಕಿರಣಗಳನ್ನು ಹೊರ ಚೆಲ್ಲಿದುವು.

"ಅವಳು ಬಹಳ ಚಂದಕ್ಕೆ ಹಾಡ್ತಾಳೆ. ಹರಿದಾಸ ಅಯ್ನೋರಿಂದ ಒಂದಿಷ್ಟು ಪದಗಳ್ನ ಕಲಿತಿದ್ದಾಳೆ." ಎಂದು ತಂದೆ ಅಭಿಮಾನದಿಂದ ನುಡಿದ.

ಮಂಜಕ್ಕ ಅಡುಗೆ ಮಾಡಿ ತಂದೆಗೂ, ಸಂಗಣ್ಣನಿಗೂ ನಡುಮನೆಯಲ್ಲಿ ಬಡಿಸಿದಳು. ಅವಳು ಕಡಲೆ ಪಾಯಸವನ್ನು ಮಾಡಿದ್ದಳು. ಹಪ್ಪಳ ಸಂಡಿಗೆಗಳನ್ನು ಕರಿದಿದ್ದಳು. ಪಯಣದಿಂದ ದಣಿದ ಸಂಗಣ್ಣ ಹೊಟ್ಟೆ ತುಂಬಾ ಊಟ ಮಾಡಿದ. ಅವನಿಗೆ ಮಂಜಕ್ಕ ಬಡಿಸಿದ ಪದಾರ್ಥಗಳು ಬಹು ಸವಿಯಾಗಿದ್ದುವು. ಆವನು ಬಾಯಲ್ಲಿ ಪಾಯಸವನ್ನು ಚಪ್ಪರಿಸುತ್ತಾ, "ಮಾವ, ನಿನ್ನ ಮಗಳು ಹಾಡೊಂದರಲ್ಲೇ ಅಲ್ಲ; ಅಡುವುದರಲ್ಲಿಯೂ ಚದುರೆ. ಈ ಬಗೆಯ ಪಾಯಸ, ಈ ಗೊಜ್ಜು, ಈ ಸಾರುಗಳನ್ನು ನಾನು ಉಣದೆ ಬಹುದಿನಗಳಾದುವು" ಎಂದು ಮಂಜಕ್ಕನ ಅಡುಗೆಯನ್ನು ಹೊಗಳಿದ.

ಊಟ ಮುಗಿಯಿತು. ಲಿಂಗಯ್ಯ ಜಗಲಿಯ ಮೇಲೆ ಹಾಸಿಗೆಯನ್ನು ಹಾಸಿ ಅತಿಥಿಗೆ ಮಲಗಲು ಎಡೆ ಮಾಡಿದ. ಊಟ ಮುಗಿಸಿ ಬಂದ ಸಂಗಣ್ಣ ತಾಂಬೂಲವನ್ನು ಮೆಲ್ಲುತ್ತಾ, "ಮಾವ, ನಿಮ್ಮ ಮಗಳು ಸೊಗಸಾಗಿ ಹಾಡುತ್ತಾಳೆ. ಅವಳಿಂದ ಒಂದೆರಡು ಪದಗಳನ್ನು ಹಾಡಸ್ತೀಯಾ? ಪರಿಚಯವಿಲ್ಲದ

ನಾನು ಸಲುಗೆಯಿಂದ ಕೇಳುತಿದ್ದೇನೆಂದು ತಪ್ಪು ತಿಳಿದುಕೊಳ್ಳಬೇಡ." ಎಂದು ಲಿಂಗಯ್ಯನನ್ನು ಕೋರಿದ.

ಲಿಂಗಯ್ಯ ಸಂಗಣ್ಣನ ಮೋರೆಯನ್ನು ದಿಟ್ಟಿಸಿ ನೋಡಿದ. ಜನ ಸಾಮಾನ್ಯನಲ್ಲಿ ತೋರದ ಗಂಬೀರಭಾವ ನಿಷ್ಕಲಂಕತೆಗಳು ಆ ಮೊಗದಲ್ಲಿ ಗೋಚರಿಸಿದುವು. ಅವನು ಮಗಳನ್ನು ಕರೆದು, "ಮಗಳೇ, ಸಂಗಣ್ಣಗೆ ನಿನ್ನ ಪದಗಳನ್ನು ಕೇಳೋ ಆಸೆ ಆಗಿದೆ. ನಿನಗೆ ಗೊತ್ತಿದ್ದ ಎರಡು ಪದಗಳನ್ನ ಹೇಳವ್ವ." ಎಂದು ನುಡಿದ.

ತನ್ನ ಊಟಮನೆಗೆಲಸಗಳನ್ನು ಮುಗಿಸಿ ಜಗಲಿಗೆ ಬಂದ ಮಂಜಕ್ಕ ಅಭ್ಯಾಗತನ ಕೋರಿಕೆಯಂತೆ ಮೂರು ನಾಲ್ಕು ಜನಪದ ಗೀತೆಗಳನ್ನು ಹಾಡಿದಳು. ಆ ಹಾಡುಗಳಲ್ಲಿ ಹುದುಗಿದ ಸವಿಭಾವಗಳನ್ನು ಸಂಗಣ್ಣ ಆಸ್ವಾದಿಸಿದ. ಅವಳ ಕೈಯಡುಗೆ ಅವನ ನಾಲಿಗೆಯನ್ನು ತಣಿಸಿದ್ದರೆ, ಅವಳ ಕೊರಳಿಂದ ಹೊರಟ ಹಾಡುಗಳು ತನಿವಾಲನ್ನೆರೆದು ಅವನ ಮನಸ್ಸನ್ನು ತಂಪಾಗಿಸಿದುವು.

"ಮಾವ, ನಾಳೆ ನಸುಕಿನಲ್ಲಿ ನಾನು ಪಯಣವನ್ನು ಕೈಗೊಳ್ಳುವೆನು." ಸಂಗಣ್ಣ ಹಾಡುಗಳು ಮುಗಿದ ಮೇಲೆ ಉಸುರಿದ: "ಬಿಸಿಲೇರುವ ಮುನ್ನ ನಾಲ್ಕಾರು ಹರದಾರಿಗಳ ದೂರ ನಡೆಯಬಹುದು."

"ಬೆಳಗಾತ ಒಂದಿಷ್ಟು ಹೊಟ್ಟೆ ತಣ್ಣಗೆ ಮಾಡಿ ಹೋಗುವಿಯಂತೆ." ಲಿಂಗಯ್ಯ ಅಕ್ಕರೆ ಬೆರೆತ ದನಿಯಲ್ಲಿ ನುಡಿದ: "ನೀನು ಯಾವಾಗ ಮರಳುವೆ?"

"ಹತ್ತು ದಿನಗಳಾಗಬಹುದು."

"ಹೇಗೂ ಗಟ್ಟಕ್ಕೆ ಹೋಗುವ ದಾರಿ ಇದು. ನೀನು ಮರಳುವಾಗ, ನಮ್ಮ ಊರಿಗೆ ಬಂದು ನನ್ನ ಮನೆಯಲ್ಲಿ ನಾಲ್ಕು ದಿನವಿರಲು ಮರೆಯಬೇಡ."

"ಆಗಲಿ ಮಾವ, ನೀನು ಅಕ್ಕರೆಯಿಂದ ಕರೆಯುವಾಗ ನಾನು ಬರುವುದು ದೊಡ್ಡ ವಿಷಯವಲ್ಲ." ಎಂದು ಸಂಗಣ್ಣ ಲಿಂಗಯ್ಯನ ಸೂಚನೆಯನ್ನು ಒಪ್ಪಿದ.

ಲಿಂಗಯ್ಯ ಹಾಸಿಕೊಟ್ಟ ಹಾಸಿಗೆಯಲ್ಲಿ ಸಂಗಣ್ಣ ಮಲಗಿದ. ಅವನ ಮನಸ್ಸಿನಲ್ಲಿ ಮಂಜಕ್ಕನ ಮೋಹನ ರೂಪ ನರ್ತಿಸುತಿದ್ದಿತು. ಕಿವಿಗಳಲ್ಲಿ ಅವಳು ಹಾಡಿದ ಗೀತೆಗಳು ಪಡಿದನಿಗುಟ್ಟಿದುವು. ಎದೆಯಲ್ಲಿ ಸಂತಸ ತುಂಬಿತ್ತು. ಕನಸಿನಲ್ಲಿಯೂ ಆತ ಮಂಜಕ್ಕನನ್ನೇ ನೋಡಿದ.

ಬೆಳಕು ಹರಿಯಿತು. ಸಂಗಣ್ಣ ಪಯಣವನ್ನು ಕೈಗೊಳ್ಳಲು ಅನು

ವಾದ. ಮಂಜಕ್ಕ ಅವನಿಗೆ ರೊಟ್ಟಿ ಬೆಣ್ಣೆಗಳನ್ನು ತಿನ್ನಗೊಟ್ಟಳು; ಆಗ ತಾನೇ ಕರೆದ ಹಾಲನ್ನು ಕುಡಿಯಲಿತ್ತಳು; ದಾರಿಗೆಂದು ಮೊಸರನ್ನಕಲಸಿ ಬುತ್ತಿ ಕಟ್ಟಿಕೊಟ್ಟಳು. ಅವನು ಮಂಜಕ್ಕನೊಡನೆ ಹೋಗಿ ಬರುವೆನೆಂದು ಹೇಳಿ, ಲಿಂಗಯ್ಯನಿಗೆ ವಂದಿಸಿ ಪ್ರಯಾಣವನ್ನು ಕೈಗೊಳ್ಳಲು ಸಿದ್ಧನಾದ.

"ನೋಡು, ನೀನು ಮರಳುವಾಗ ನನ್ನ ಮನೆಗೆ ಬರಲು ಮರೆಯ ಬೇಡ." ಎಂದು ಲಿಂಗಯ್ಯ ನುಡಿಯುತ್ತಾ ಸಂಗಣ್ಣನನ್ನು ಬೀಳ್ಕೊಟ್ಟ.

"ಆಗಲಿ ಮಾವ. ನೀನು ಪ್ರೀತಿಯಿಂದ ಕರೆಯುವಾಗ ನಾನು ಬಾರ ದಿರುತ್ತೇನೆಯೇ? ಎಂದು ಹೇಳುತ್ತಾ ಸಂಗಣ್ಣ ಮನೆಯ ಮೆಟ್ಟಲನ್ನು ಇಳಿದ. ಅವನ ಕಣ್ಣುಗಳು ಮಂಜಕ್ಕನ ಕಡೆ ಹೊರಳಿದುವು. ಅವಳ ಕಣ್ಣುಗಳ ನೋಟವೇ ಅವನನ್ನು ಬೀಳ್ಕೊಡಲಿರುವ ನುಡಿಯಾಯಿತು.

ಸಂಗಣ್ಣ ಕಣ್ಮರೆಯಾಗುವ ತನಕ, ಮಂಜಕ್ಕ ಮನೆಯ ಮೆಟ್ಟಲಲ್ಲಿ ನಿಂತು ಅವನನ್ನು ನೋಡುತಿದ್ದಳು. ಹತ್ತೆಂಟು ಮಾರುಗಳ ದೂರ ಹೋದ ಮೇಲೆ ಸಂಗಣ್ಣ ಕತ್ತು ತಿರುಗಿಸಿ ನೋಡಿದ. ಮಂಜಕ್ಕನ ಮುಖ ಅವನ ದೃಷ್ಟಿಯಲ್ಲಿ ಬಿದ್ದಿತು. ಅವರಿಬ್ಬರ ಕಣ್ಣುಗಳು ಒಂದು ಗೂಡಿದುವು. ಸಂಗಣ್ಣ ಕಣ್ಮರೆಯಾಗಲು, ಅವಳು ಭಾರವಾದ ಎದೆಯಿಂದ ಮನೆಯೊಳಗೆ ಹಜ್ಜೆ ಹಾಕಿದಳು.

ಸಂಗಣ್ಣ ಹೊರಟು ಹೋಗಲು ಮಂಜಕ್ಕನನ್ನು ಆಲಸ್ಯ ಕವಿಯಿತು. ಅವಳ ಕಣ್ಣ ಮುಂದೆ ಸಂಗಣ್ಣನ ಮುಗುಳ್ನಗೆ ಬೆರೆತ ಮೊಗ, ಹೊಳೆಯುವ ಕಣ್ಣುಗಳು ಕುಣಿದುವು. ಅವನು ಆಡಿದ ಮಾತುಗಳು ಅವಳ ಸ್ಮೃತಿಪಥ ದಲ್ಲಿ ನುಗ್ಗಿದುವು. ತಮ್ಮ ಸೂರಿನ ಕೆಳಗೆ ಒಂದಿರುಳು ಕಳೆದ ಮನುಷ್ಯನನು ಕುರಿತು ತನ್ನ ಮನಸ್ಸು ನೆನೆಯುವುದನ್ನು ಕಂಡು ಅವಳಿಗೆ ವಿಸ್ಮಯವಾಯಿತು. ತನ್ನ ಮರುಳುತನಕ್ಕೋಸ್ಕರ ಅವಳು ನಕ್ಕಳು. ಸಂಗಣ್ಣನನ್ನು ನೆನೆಯುವುದು ಮರುಳುತನವೆಂದು ಅವಳಿಗೆ ತೋರಿದರೂ, ಅವನನ್ನು ಸ್ಮರಿಸದೆ ಇರುವುದು ಅವಳಿಂದ ಸಾಧ್ಯವಾಗಲಿಲ್ಲ.

ದಿನಗಳು ಹತ್ತು ಸಾಗಿದುವು. ಹತ್ತನೆಯ ದಿನ ಮಂಜಕ್ಕ, "ಅಪ್ಪಾ— ಈ ದಿನವಲ್ಲವೇ ಸಂಗಣ್ಣ ಬರುವನೆಂದು ಹೇಳಿದುದು?" ಎಂದು ತಂದೆಯನ್ನು ಪ್ರಶ್ನಿಸಿದಳು.

"ಬರುತ್ತೇನೆಂದು ಅವನು ಹೇಳಿದ. ಒಂದಿರುಳು ನಮ್ಮ ಮಾಡಿನ

ಕೆಳಗೆ ಕಳೆದ ಮಾತ್ರಕ್ಕೆ ಅವನು ಬರುವನೆಂಬ ನಂಬುಗೆಯೇನು?" ಎಂದು ಲಿಂಗಯ್ಯ ಮಾರ್ನುಡಿದ. ಅಪರಿಚಿತ ತರುಣನ ಆಗಮನ ವಿಚಾರದಲ್ಲಿ ಮಗಳು ವಹಿಸಿದ ಆಸಕ್ತಿಯನ್ನು ಕಂಡು ಅವನಿಗೆ ಕೌತುಕವಾಯಿತು.

ಹತ್ತನೆಯ ದಿನ ಸಂಜೆಯಾದರೂ ಸಂಗಣ್ಣ ಕಲ್ಲೂರಿಗೆ ಬರಲಿಲ್ಲ. ಅವಳು ಆಗಾಗ ಬಾಗಿಲಿಗೆ ಬಂದು ಅವನ ಆಗಮನವನ್ನು ನಿರೀಕ್ಷಿಸುತ್ತಿದ್ದಳು. ಆದರೆ ಅವನ ಮೊಗ ಮಾತ್ರ ಗೋಚರಿಸಲಿಲ್ಲ. ಸಂಗಣ್ಣನು ತಮ್ಮನ್ನೆಲ್ಲಾ ಮರೆತನೆಂದು ಅವಳ ಮನಸ್ಸು ದುಗುಡ ತಾಳಿತು.

ಸಂಗಣ್ಣ ಹತ್ತನೆಯ ದಿನ ಕಲ್ಲೂರಿಗೆ ಬರದಿದ್ದರೂ ಅವನು ಮಂಜಕ್ಕ ಲಿಂಗಯ್ಯ ಇವರನ್ನು ಮರೆತಿರಲಿಲ್ಲ. ಅವನು ಹನ್ನೆರಡನೆಯ ದಿನ ಬಂದ. ಅವನನ್ನು ಕಾಣಲು ಮಂಜಕ್ಕನ ಮುಖ ಅರಳಿದ ಮಂದಾರ ಕುಸುಮವಾಯಿತು. ಅವನು ಕುಳ್ಳಿರಲು ಹಸೆಯನ್ನು ಹಾಸುತ್ತಾ," ನೀನು ಮೊನ್ನೆಯೇ ಬರುವಿಯೆಂದು ನಾನು ನಂಬಿದ್ದೆ. ನೀನು ಬಾರದುದರಿಂದ ಬೇರೊಂದು ಹಾದಿಯಿಂದ ಊರಿಗೆ ಮರಳಿದೆಯೆಂದು ಭಾವಿಸಿದೆ." ಎಂದು ಮಂಜಕ್ಕ ನುಡಿದಳು.

ಮಂಜಕ್ಕನ ನುಡಿಯಲ್ಲಿ ಕಾತರತೆ ಬೆರೆತಿದ್ದುದು ಸಂಗಣ್ಣನಿಗೆ ಗೋಚರಿಸದೆ ಇರಲಿಲ್ಲ. ಅವನು ನಗುತ್ತಾ "ನಿನ್ನನ್ನು ಮತ್ತು ಮಾವನನ್ನು ಮರೆಯಲು ನನ್ನಿಂದಾಗಲಿಲ್ಲ. ನಿನ್ನ ಕೈಯಡುಗೆಯನ್ನು ಮತ್ತೊಮ್ಮೆ ಸವಿಯಬೇಕೆಂದು ನನಗೆ ಆಸೆಯಾಯಿತು." ಎಂದು ಮಾರ್ನುಡಿದ.

ಮಂಜಕ್ಕ ನೀಡಿದ ಹಾಲು ಹಣ್ಣುಗಳನ್ನು ಮೆದ್ದಾದ ಮೇಲೆ ಸಂಗಣ್ಣ ತಾನು ತಂದ ಗಂಟನ್ನು ಬಿಚ್ಚಿದ. ಅದರೊಳಗಿರುವುದೇನು ಎಂಬ ಕುತೂಹಲ ಮಂಜಕ್ಕನಲ್ಲಿ ತಲೆತೋರಿತು. ಸಂಗಣ್ಣ ಗಂಟಿನೊಳಗಿಂದ ಒಂದು ಮುತ್ತಿನ ಹಾರವನ್ನು ಎರಡು ಜತೆ ಬಂಗಾರದ ಬಳೆಗಳನ್ನು ಹೊರತೆಗೆದ. ಅವನು ಅವುಗಳನ್ನು ಮಂಜಕ್ಕನ ಕೈಗೆ ಇತ್ತ. "ಇವು ಚೆನ್ನಾಗಿವೆಯೇ?" ಎಂದು ಪ್ರಶ್ನಿಸಿದ.

ಮಂಜಕ್ಕ ನಗಗಳನ್ನು ತೆಗೆದುಕೊಂಡು ಅವುಗಳ ಅಂದ ಚಂದಗಳನ್ನು ನೋಡಿದಳು. ಒಡವೆಗಳು ಬಹಳ ಅಂದವಾಗಿದ್ದುವು. ಮುತ್ತಿನ ಹಾರದ ನಡುವೆ ಇದ್ದ ವಜ್ರದ ಪದಕ ನಕ್ಷತ್ರದಂತೆ ಹೊಳೆಯುತ್ತಿದ್ದಿತು. ಆಭರಣಗಳು ಅವಳಿಗೆ ಮೆಚ್ಚಿಕೆಯಾದುವು. ಅವು ಬಹಳ ಬೆಲೆಯುಳ್ಳವುಗಳು ಎಂದು ಅವಳಿಗೆ ಅನಿಸದೆ ಇರಲಿಲ್ಲ. ಯಾರಿಗೋಸುಗ ಅವನು ಈ ಒಡವೆ

ಗಳನ್ನು ತಂದನೆಂದು ಅವಳು ತರ್ಕಿಸತೊಡಗಿದಳು. ಮನೆಯಲ್ಲಿ ಸಂಗಣ್ಣ ನಿಗೆ ಮಡದಿಯಿರಬಹುದು; ಅವಳಿಗೋಸುಗ ಅವನು ತಂದಿರ ಬಹುದು ಎಂದು ಅವಳ ಬುದ್ಧಿ ಶಂಕಿಸಿತು. ಈ ಆಲೋಚನೆ ಚಿತ್ತದಲ್ಲಿ ಸುಳಿಯಲು ಅವಳ ಮುಖ ಮ್ಲಾನವಾಯಿತು.

"ಆಭರಣಗಳು ಹೇಗಿವೆ?" ಎಂಬ ಸಂಗಣ್ಣನ ಪ್ರಶ್ನೆ ಅವಳನ್ನು ಎಚ್ಚರಿಸಿತು.

"ದಿವ್ಯವಾಗಿವೆ. ನಿನ್ನ ಮನೆಯವರಿಗೋಸ್ಕರ ತೆಗೆದುಕೊಂಡೆ ಎಂದು ತೋರುವುದು."

"ಹೂಂ. ಮನದಲ್ಲಿ ಮನೆ ಮಾಡಿದವರಿಗೆ!"

"ಅವರಿಗೆ ತೋರಿಸಿದರಾಯಿತಲ್ಲ! ನಾನೇಕೆ ನೋಡಬೇಕು.?"

"ನನ್ನ ಆಭರಣಗಳನ್ನು ನೀನು ಮೆಚ್ಚಿದರೆ ಅವರೂ ಮೆಚ್ಚುವರು."

"ನಾನು ಒಪ್ಪಿದುದನ್ನು ಅವರೇಕೆ ಒಪ್ಪುವರು?"

"ಆ ಭರವಸೆ ನನಗಿದೆ."

ಪ್ರತಿ ನುಡಿಯದೆ ಮಂಜಕ್ಕ ತಾನು ಹಿಡಿದ ಒಡವೆಗಳನ್ನು ಸಂಗಣ್ಣನಿಗೆ ಮರಳಿ ಕೊಟ್ಟಳು. ಅವಳು ಮರಳಿ ನೀಡಿದುದನ್ನು ಕಂಡು ಅವನ ಮೊಗ ದಲ್ಲಿ ಕಿರು ಮೋಡ ಸುಳಿಯಿತು. ಅವನು "ಒಡವೆಗಳು ಚೆನ್ನಾಗಿಲ್ಲ ಅಲ್ಲವೇ?" ಎಂದು ಕೇಳಿದ.

"ಆಗಲೇ ಹೇಳಿದೆನಲ್ಲ ದಿವ್ಯವಾಗಿವೆಯೆಂದು."

"ನೀನು ಅವುಗಳನ್ನು ಮರಳಿ ಕೊಟ್ಟುದೇಕೆ?"

"ನಿನ್ನವರಿಗೋಸುಗ ತಂದುದು ಎಂದು ನೀನೇ ಹೇಳಿದೆಯಲ್ಲ?"

"ಆ ನನ್ನವರು ಯಾರೆಂದು ತಿಳಿದಿರುವೆ?"

"ನಾನು ಹೇಗೆ ತಿಳಿಯಬಲ್ಲೆ? ನಿನ್ನ ಮಾತೇ ಒಂದು ಒಗಟಾಗಿದೆ."

"ಆ ನನ್ನವರೇ ನೀನು! ನಿನಗೋಸುಗವಾಗಿಯೇ ಈ ಒಡವೆಗಳನ್ನು ತಂದಿದ್ದೇನೆ."

"ನಾನು!" ಹರ್ಷ ಮತ್ತು ಕೌತುಕಗಳ ಕಿರಣಗಳು ಮಂಜಕ್ಕನ ಕಣ್ಣುಗಳಿಂದ ಹೊರಚೆಲ್ಲಿದುವು. ಈ ಒಡವೆಗಳು ಅವಳಲ್ಲಿ ಸಂಗಣ್ಣನಿರಿಸಿದ್ದ ಆತ್ಮೀಯತೆಯನ್ನು ಸಾರಿ ಹೇಳುತಿದ್ದುವು.

"ನೀನು ತೆಗೆದುಕೊಳ್ಳುವುದಿಲ್ಲವೇ?" ಒಡವೆಗಳನ್ನು ಮಂಜಕ್ಕ ಮುಟ್ಟ ದುದನ್ನು ಕಂಡು ಸಂಗಣ್ಣ ಪ್ರಶ್ನಿಸಿದ.

"ಇಲ್ಲ. ಅಪ್ಪ ಏನಾದರೂ ತಿಳಿದುಕೊಂಡಾನು." ಎಂದು ಸಂಕೋಚ ಸ್ವರದಲ್ಲಿ ಮಂಜಕ್ಕ ಹೇಳಿದಳು.

"ನಿನಗೆ ಆ ಚಿಂತೆ ಬೇಡ. ಮಾವನನ್ನು ಕೇಳಿ ಒಪ್ಪಿಸುವ ಭಾರ ನನ್ನದು." ಎಂದು ಸಂಗಣ್ಣ ಭರವಸೆಯನ್ನು ನೀಡಿದ.

ಗದ್ದೆಗೆ ತೆರಳಿದ್ದ ಲಿಂಗಯ್ಯ ಮನೆಗೆ ಮರಳಿದ. ಸಂಗಣ್ಣ ಬಂದುದನ್ನು ಕಂಡು ಅವನಿಗೆ ಸಂತೋಷವಾಯಿತು. ಅವನು ಸಂಗಣ್ಣನನ್ನು ಕುಶಲ ವಾರ್ತೆಯನ್ನು ಕೇಳಿದ. ಅಂದು ಮಂಜಕ್ಕ ವಿಶೇಷವಾದ ಅಡುಗೆಗಳನ್ನು ಮಾಡಿದ್ದಳು. ಇಂದು ಆಕೆ ಬಡಿಸಿದ ರಸಕವಳ ಹಿಂದಿನ ಅಡುಗೆಗಿಂತಲೂ ಹೆಚ್ಚಾಗಿ ಸವಿತೋರಿತು ಸಂಗಣ್ಣನಿಗೆ. ಲಿಂಗಯ್ಯ ಉಣ್ಣುತ್ತಾ ಅಭ್ಯಾಗತನ ಕುಲಗೋತ್ರಗಳನ್ನು ವಿಚಾರಿಸಿದ. ಸಂಗಣ್ಣ ತನಗೆ ತಾಯಿತಂದೆಗಳಿಲ್ಲವೆಂದೂ, ತಾನು ಏಕಾಂಗಿಯಾಗಿರುವೆನೆಂದೂ ಸುಳ್ಳುಸುರಿದ. ಸಂಗಣ್ಣನಿಗೆ ಇನ್ನೂ ಮದುವೆಯಾಗಿಲ್ಲವೆಂಬುದು ತಿಳಿಯಲು, ಮಂಜಕ್ಕನನ್ನೇಕೆ ಸಂಗಣ್ಣನಿಗೆ ಕೊಟ್ಟು ಮದುವೆಮಾಡಬಾರದೆಂಬ ಆಲೋಚನೆ ಲಿಂಗಯ್ಯನ ಚಿತ್ತದಲ್ಲಿ ಸುಳಿಯಿತು.

ತಾನು ಮಂಜಕ್ಕನಿಗೆ ಉಡುಗೊರೆ ಕೊಡಲು ನಗಗಳನ್ನು ತಂದಿರುವೆನೆಂದು ಸಂಗಣ್ಣ ಹೇಳಿದಾಗ, ಅವನ ಕಾರ್ಯವನ್ನು ಲಿಂಗಯ್ಯ ಆಕ್ಷೇಪಿಸಲಿಲ್ಲ. ಆತನೂ ಆ ಒಡವೆಗಳನ್ನು ನೋಡಿ ಸಂತೋಷ ತಾಳಿದ. ಆ ಆಭರಣಗಳನ್ನು ನೋಡಿದಾಗ ಲಿಂಗಯ್ಯನಿಗೆ ಆತನು ತಾನು ಊಹಿಸಿದುದಕ್ಕಿಂತಲೂ ಸಿರಿವಂತನಾಗಿರುವನೆಂಬುದು ಹೊಳೆಯಿತು. ಮಂಜಕ್ಕನಾದರೂ ಸಂಗಣ್ಣನನ್ನು ಮೆಚ್ಚಿದಂತೆ ತೋರಿತು ಲಿಂಗಯ್ಯನಿಗೆ. ಈ ಎಳೆಯರೀರ್ವರು ಪರಸ್ಪರ ಪ್ರೀತಿಸುತ್ತಿದ್ದರೆ, ಅವರೀರ್ವರ ಕೈಹಿಡಿಸಿ, ತನ್ನ ಬಾಳುವೆಯ ಕೊನೆಯ ಹೊಣೆಯನ್ನು ನಿರ್ವಹಿಸಿ, ತನ್ನ ಹೆಗಲುಗಳನ್ನೇಕೆ ಹಗುರಗೊಳಿಸಬಾರದು ಎಂದು ಲಿಂಗಣ್ಣ ಗಾಢವಾಗಿ ಆಲೋಚಿಸ ತೊಡಗಿದ.

ಸಂಗಣ್ಣನು ಕೊಟ್ಟ ಒಡವೆಗಳನ್ನು ಮಂಜಕ್ಕ ತೊಟ್ಟುಕೊಂಡಾಗ, ಅವು ಆಕೆಯ ಕಳೆಯನ್ನು ಹೆಚ್ಚಿಸಿದುವು. ಸಂಗಣ್ಣ ನಗುತ್ತಾ "ನನ್ನ ಒಡವೆಗಳಿಗೆ ಬೆಲೆ ತೆರಬೇಕಲ್ಲ." ಎಂದು ಹೇಳಿದ.

"ಬೆಲೆಯೇ?" ಮಂಜಕ್ಕ ವಿಸ್ಮಯ ತಾಳಿದಳು: "ಉಡುಗೊರೆಗೊಟ್ಟ ಒಡವೆಗೆ ಬೆಲೆಯಿದೆಯೇ?"

"ಬೆಲೆಯೇನು?"

"ಒಂದೊಂದು ಒಡವೆಗೂ ಒಂದು ಹಾಡು!"

"ಇಷ್ಟೇನೇ. ನೀನು ಬೆಲೆ ಕೇಳಿದಾಗ ನಾನು ಏನೋ ಆಲೋಚಿಸಿದ್ದೆ," ಎಂದು ನಗುತ್ತಾ ಮಂಜಕ್ಕ ನುಡಿದಳು: "ಹಾಡಿಗೊಂದು ನಗದೊರಕವುದಾದಾದರೆ, ನಾನು ಎಷ್ಟು ಬೇಕಾದರೂ ಹಾಡಿಯೇನು! ಈ ಪದಗಳಿಗೆ ಬೆಲೆತೆತ್ತು ನಿನ್ನ ಮನೆ ತೊಳೆದು ಹೋದೀತು!"

"ನಿನ್ನ ಹಾಡಿನ ಬೊಕ್ಕಸ ಅಷ್ಟು ವಿಪುಲವಾಗಿರುವುದಾದರೆ, ನಾನು ಮನೆ ತೊಳೆದುಕೊಳ್ಳಲೂ ಸಿದ್ಧ." ಎಂದು ಹೇಳಿ ಸಂಗಣ್ಣ ಗಂಟಿನೊಳಗಿದ್ದ ಕೊಳಲನ್ನು ತೆಗೆದುಕೊಳ್ಳಲು ಕೈಹಾಕಿದ.

ಸಂಗಣ್ಣನ ಕೋರಿಕೆಯಂತೆ ಮಂಜಕ್ಕ ತಾನು ಬಲ್ಲ ಕೆಲವು ಹಳ್ಳಿಯ ಹಾಡುಗಳನ್ನು ಹಾಡಿದಳು. ಆ ಗೀತೆಗಳನ್ನು ಸಂಗಣ್ಣ ತನ್ನ ಕೊಳಲಿನಲ್ಲಿ ನುಡಿಸತೊಡಗಿದ. ಅವನ ಮುರಲೀ ಗಾನವನ್ನು ಕೇಳಿದಾಗ, ಆತ ಕೊಳಲು ನುಡಿಸುವುದರಲ್ಲಿ ಪಳಗಿದವನು ಎಂಬುದು ಅವಳಿಗೆ ಅರಿವಾಯಿತು.

ಲಿಂಗಯ್ಯನ ಬಯಕೆಯಂತೆ ಸಂಗಣ್ಣ ಎರಡು ದಿನ ಕಲ್ಲೂರಿನಲ್ಲಿಯೇ ಉಳಿದ. ಅವನು ಲಿಂಗಯ್ಯನ ತೋಟ ಗದ್ದೆಗಳನ್ನು ನೋಡಿದ. ಗದ್ದೆಗಳಲ್ಲಿ ಪೈರು ಕಟಾವಿಗೆ ಬಂದಿತ್ತು. ಲಿಂಗಯ್ಯ ಆಳುಗಳನ್ನು ಕರೆದುಕೊಂಡು ಪೈರು ಕಟಾವಿಗೆ ಹೊರಟಾಗ, "ಮಾವ, ನಾನೂ ಬರ್‍ತೇನೆ." ಎಂದು ಸಂಗಣ್ಣ ಕುಡುಗೋಲನ್ನು ತೆಗೆದುಕೊಂಡು ಹೊರಟ. ಅವನು ಗದ್ದೆಯಲ್ಲಿ ಆಳುಗಳೊಡನೆ ಬೆರೆತು, ಅವರು ಕೊಟ್ಟ ಎಲೆ ಅಡಿಕೆಗಳನ್ನು ಮೆಲ್ಲುತ್ತಾ ಪೈರು ಕತ್ತರಿಸ ತೊಡಗಿದ. ಆದರೆ ಅವರಷ್ಟು ಚುರುಕಾಗಿ ಪೈರು ಕಟಾವು ಮಾಡಲು ಅವನಿಂದಾಗಲಿಲ್ಲ. ಅವನು ಹಿಂದುಳಿದ. ಆಗ ಲಿಂಗಯ್ಯ "ಸಂಗಣ್ಣ ನೀನು ಮಾತಿನಲ್ಲಿ ಮುಂದಾಗಿದ್ದೀಯೆ. ಆದರೆ ಕೆಲಸಗಳಲ್ಲಿ ಹಿಂದೆ ಬಿದ್ದೆ." ಎಂದು ಸರಸದಲ್ಲಿ ಹೇಳಿದ.

"ಇಲ್ಲ ಮಾವ, ನಿನ್ನೆ ದಿನ ನಡೆದು ನಾನು ಸ್ವಲ್ಪ ದಣಿದಿದ್ದೇನೆ ಅಷ್ಟೆ. ಆದುದರಿಂದ ಕೈಮುಂದೋಡುವುದಿಲ್ಲ"

"ನೀನು ಬೆಳೆ ಕಟಾವಿಗೆ ಬಂದುದು ಒಳ್ಳೆಯದೇ ಆಯಿತು."

"ಏಕೆ?"

"ನಿನ್ನ ಕೆಲಸಮಾಡುವ ಶಕ್ತೀನ ಪರೀಕ್ಷಿಸಿದ ಹಾಗಾಯಿತು!" ಲಿಂಗಯ್ಯನ ತುಟಿಗಳಲ್ಲಿ ಹಾಸ್ಯದ ಕಿರಣ ಲಾಸ್ಯವಾಡಿತು.

"ಪರೀಕ್ಷೆ ಏಕೆ?" ಕೌತುಕ ದೃಷ್ಟಿಯಿಂದ ಸಂಗಣ್ಣ ಮುದುಕನನ್ನು ನೋಡಿದ.

"ಪರೀಕ್ಷೆಯಾಗಬೇಕು. ಈ ಪರೀಕ್ಷೆಯಲ್ಲಿ ಗೆದ್ದರೆ ನಿನಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುವ ಎಂದು ಆಲೋಚಿಸಿದ್ದೆ!"

ಲಿಂಗಯ್ಯನ ನಗೆ ಬೆರೆತ ಮಾತು ಸಂಗಣ್ಣನ ಎದೆಗೆ ತಗಲಿತು. ಅವನು, "ಹಿಂದೆ ಬಿಲ್ಲೆತ್ತುವ ಪರೀಕ್ಷೆಯಲ್ಲಿ, ಅಂಬು ಹೊಡೆಯುವ ಪರೀಕ್ಷೆಯಲ್ಲಿ ಗೆದ್ದವರಿಗೆ ತಮ್ಮ ಮಗಳಂದಿರನ್ನು ಕೊಡುತಿದ್ದರೆಂದು ಕೇಳಿದ್ದೇನೆ. ಆದರೆ ಬೆಳೆ ಕಟಾವಿನ ಪರೀಕ್ಷೆಯಲ್ಲಿ ಗೆದ್ದವರಿಗೆ ಹೆಣ್ಣುಕೊಟ್ಟ ಕತೆಯನ್ನು ನಾನು ಎಲ್ಲಿಯೂ ಕೇಳಿಲ್ಲ." ಎಂದು ಉತ್ತರಿಸಿದ.

"ನೀನು ಹೇಳಿದುದು ಅರಸು ಮಕ್ಕಳಿಗಿರುವ ಪರೀಕ್ಷೆ. ಆದರೆ ನಾವು ನೆಲದವ್ವನ ಮಕ್ಕಳು. ಉಳುಮೆ ಕಟಾವುಗಳು ನಮಗಿರುವ ಪರೀಕ್ಷೆಗಳು."

"ಈ ಪರೀಕ್ಷೆಯಲ್ಲಿ ನಾನು ಗೆದ್ದರೆ, ನಿನ್ನ ಮಗಳನ್ನು ನನಗೆ ಮದುವೆ ಮಾಡಿ ಕೊಡುವೆಯಾ?"

"ಮುದುಕ ಲಿಂಗಯ್ಯ ಎಂದೂ ಮಾತು ಮುರಿದವನಲ್ಲ."

"ಬಿಡ್ಬೇಡಣ್ಣ. ಪರೀಕ್ಸೇಲಿ ಗೆದ್ದರೆ ನಮ್ಗೆಲ್ಲ ಒಂದು ಬಿದರ್ೂಟ ಸಿಗು ವುದು." ಎಂದು ನುಡಿದ ಆಳುಗಳಲ್ಲೊಬ್ಬ.

ಈಗ ಕೆಲಸಗಾರರು ಒಂದನೆಯ ಸಾಲನ್ನು ಮುಗಿಸಿ, ಎರಡನೆಯ ಸಾಲನ್ನು ಹಿಡಿದರು. ಈ ಸಾಲಿನಲ್ಲಿ ತಾನು ಎಲ್ಲರಿಗಿಂತಲೂ ಮೊದಲು ಪೈರು ಕೊಯಿದು ಮುಗಿಸಬೇಕೆಂದು ಸಂಗಣ್ಣ ನಿರ್ಧರಿಸಿದ. ಅವನು ಬಾಗಿಸುದ ಬೆನ್ನನ್ನು ಮೇಲೆತ್ತಲಿಲ್ಲ; ಆ ಕಡೆ ಈ ಕಡೆ ದೃಷ್ಟಿ ಹೊರಳಿಸಲಿಲ್ಲ. ಸರಸರನೆ ಪೈರನ್ನು ಕತ್ತರಿಸುತ್ತಾ ಅವನು ಮುಂದೆ ಸರಿದ. ತನ್ನ ಮುಂದಿರುವುದು ಪೈರಲ್ಲ; ಕದನ ರಂಗದಲ್ಲಿ ಅಡ್ಡಗಟ್ಟಿ ನಿಂತಿರುವ ಹಗೆಗಳು; ಅವರನ್ನೆಲ್ಲಾ ತರಿದೊಟ್ಟಿದರೆ ಮಂಜಕ್ಕ ತನ್ನ ಕೊರಳಿಗೆ ಹೂಮಾಲೆ ಸೂಡುವಳು, ಎಂಬ ಭಾವನೆ ಅವನ ಚಿತ್ತದಲ್ಲಿ ತೇಲಿತು. ಈ ಆಲೋಚನೆ ಅವನ ಬಳಲಿದ ತೋಳುಗಳಿಗೆ ಹೊಸ ಶಕ್ತಿಯನ್ನು ನೀಡಿತು. ಅವನ ಕೈಯಲ್ಲಿ ಕುಡು ಗೋಲು ಮಿಂಚಿನಂತೆ ಸರಿದಾಡಿತು; ಪೈರುಗಳನ್ನು ತರಿಯ ತೊಡಗಿತು. ಬಲಗೈ ತರಿದ ಪೈರನ್ನು ಎಡಗೈ ಗುಡ್ಡೆಗೂಡಿಸಿತು. ಅವನ ಕೈ ಚಳಕವನ್ನು ಕಂಡು ಆಳುಗಳು "ಅಣ್ಣ ಪರ್ವಾಗಿಲ್ವೇ? ನಮ್ಮನ್ನೆಲ್ಲಾ ಸೋಲಿಸಲು ಹೊರಟಿ

ದ್ದಾನೆ!" ಎಂದು ಹೇಳುತ್ತಾ ತಮ್ಮ ಕೆಲಸವನ್ನು ತೀವ್ರಗತಿಯಲ್ಲಿ ಮುಂದು ವರಿಸಿದರು; ಅವರು ಸಂಗಣ್ಣನನ್ನು ಸರಿಗಟ್ಟಿ ತೊಡಗಿದರು.

ಸಂಗಣ್ಣ ಉಸಿರು ಬಿಗಿಹಿಡಿದ. ಸೋತ ತೋಳುಗಳನ್ನು ಅವನು ಸಡಿಲ ಬಿಡಲಿಲ್ಲ. ಇದು ಕೇವಲ ಒಂದು ಆಟದ ಮೇಲಾಟವಲ್ಲ; ತನ್ನ ಜೀವನದ ಸತ್ವ ಪರೀಕ್ಷೆ ಎಂದು ಅವನು ಭಾವಿಸಿದ. ಮೊಗದಿಂದ ಧಾರಾಕಾರವಾಗಿ ಬೆವರು ಸುರಿಯುತಿದ್ದರೂ ಅದನ್ನು ಒರಸಿಕೊಳ್ಳಲು ಅವನು ಕೈಗಳನ್ನು ಮೇಲೆತ್ತಲಿಲ್ಲ. ಆಳುಗಳು ಎರಡು ಮಾರು ಹಿಂದಿದ್ದಾಗ, ಅವನು ತನ್ನ ಸಾಲನ್ನು ಕೊಯಿದು ಮುಗಿಸಿದ.

"ಭಲಾ ಅಣ್ಣಾವ್ರು ಗೆದ್ರು." ಎಂದು ಆಳುಗಳು ಅವನನ್ನು ಹೊಗಳಿದರು. ಸಂಗಣ್ಣನ ಹಟಸಾಧನೆಯನ್ನು ಕಂಡು ಲಿಂಗಯ್ಯನೂ ಅಚ್ಚರಿಪಟ್ಟ.

"ನೋಡು ಮಾವ, ಇನ್ನು ಮಾತು ಮುರಿಯ ಬಾರದು. ಈ ನಿನ್ನ ಪರೀಕ್ಷೆಯಲ್ಲಿ ನಾನು ಗೆದ್ದೆ." ಸಂಗಣ್ಣನ ಕೊರಳಿಂದ ಹೆಮ್ಮೆಯ ನುಡಿ ಹೊರಟಿತು.

"ಇದೊಂದು ಪರೀಕ್ಷೆಲಿ ಗೆದ್ದರಾಯಿತೇ?" ಲಿಂಗಯ್ಯ ನುಡಿದ.

"ಮತ್ತಾವ ಪರೀಕ್ಷೆಗಳಿವೆ?" ಸಂಗಣ್ಣ ಹುಬ್ಬುಗಳನ್ನು ಗಂಟಿಕ್ಕಿದ.

"ಇನ್ನು ಉಳುಮೆಯ ಪರೀಕ್ಷೆ. ಭಾರದ ಗೊಬ್ಬರದ ಕುಕ್ಕೆಯನ್ನು ಹೊರುವ ಪರೀಕ್ಷೆ, ಇವೆಲ್ಲಾ ಆಗಬೇಕು."

"ನಿನ್ನ ಪರೀಕ್ಷೆಗಳೆಲ್ಲಾ ಮುಗಿಯುವ ಹೊತ್ತಿಗೆ ಕೂಸಾಗಿದ್ದವನ ಗಡ್ಡ ಹಣ್ಣಾಗಿರುತ್ತೆ."

ಕೆಲಸ ಮುಗಿಸಿ ಮುಗಿಸಿ ಮನೆಗೆ ಮರಳಲು ಸಂಗಣ್ಣ, "ನೋಡು, ನಿನ್ನ ಅಪ್ಪ ನಿನ್ನನ್ನು ನನಗೊಪ್ಪಿಸಿದರು" ಎಂದು ಮಂಜಕ್ಕನಿಗೆ ಹೇಳಿದ.

ಈ ನುಡಿಗೇಳಿ ಮಂಜಕ್ಕನ ಹೃದಯದಲ್ಲಿ ವಿಸ್ಮಯ ಲಜ್ಜೆಗಳು ಏಕಕಾಲ ದಲ್ಲಿ ಉದಿಸಿದುವು. ಅವಳು ಬೊಗಸೆಗಣ್ಣುಗಳಿಂದ ಅವನನ್ನು ನೋಡಿದಳು.

"ಅವನು ಒಡ್ಡಿದ ಪಣದಲ್ಲಿ ನಾನು ನಿನ್ನನ್ನು ಗೆದ್ದೆ" ಎಂದು ನುಡಿದು ಸಂಗಣ್ಣ ತನ್ನ ಪರೀಕ್ಷೆಯ ಕತೆಯನ್ನು ಅವಳಿಗೆ ವಿವರಿಸಿ ಹೇಳಿದ. ಅದನ್ನು ಕೇಳಿ ಮಂಜಕ್ಕನಿಗೂ ಸಂತೋಷವಾಯಿತು. ಅಭಿಮಾನ ಬೆರೆತ ದೃಷ್ಟಿಯಲ್ಲಿ ಅವಳು ಸಂಗಣ್ಣನನ್ನು ನೋಡಿದಳು.

ಸಂಗಣ್ಣ ಎರಡು ದಿನ ಲಿಂಗಯ್ಯನ ಮನೆಯಲ್ಲಿ ಉಳಿದ; ಅವನ ಗದ್ದೆ

ಕೆಲಸಗಳಿಗೆ ನೆರವಾದ. ಸಂಜೆ ಹೊತ್ತು ಮಂಜಕ್ಕನ ಹಾಡು ಕೇಳುವುದ ರಿಂದ ಸಂತೋಷ ತಳೆಯುತಿದ್ದ; ಅವನು ಮಂಜಕ್ಕನೊಡನೆ ಪಗಡೆ ಯಾಡುತಿದ್ದ.

ತಾನು ಇಪ್ಪತ್ತು ದಿನಗಳ ಅನಂತರ ಮರಳಿ ಬರುವೆನೆಂದು ಸಂಗಣ್ಣ, ಮಂಜಕ್ಕನ, ಲಿಂಗಯ್ಯ ಇವರಿಗೆ ತಿಳಿಸಿ, ಕಲ್ಲೂರಿನಿಂದ ಹೊರಟ. ಅವನು ಹೊರಟಾಗ ಮಂಜಕ್ಕ ಎದೆಯಲ್ಲಿ ಭಾರವಾಯಿತು. ಕಣ್ಣುಗಳಲ್ಲಿ ಹನಿಗಳು ನೆರೆದುವು. ಮಾತಾಡುವಾಗ ಕೊರಳು ಬಿಗಿಯಿತು. ಅವನು ಕಣ್ಮರೆಯಾಗುವ ತನಕ ನೋಡಿದಳು. ನಾಲ್ಕು ದಿನಗಳ ಪರಿಚಯದಿಂದ ಕೊನರಿದ ಆತ್ಮೀಯತೆ ಬಾಲ್ಯದ ಒಡನಾಟದಿಂದ ಮೂಡಿದ ಗೆಳೆತನಕ್ಕಿಂತಲೂ ದೃಢವಾದುದೆಂದು ಅವಳಿಗೆ ಅನಿಸಿತು.

---

## ಹದಿಮೂರು

ಸಾಂತಣ್ಣನ ಮತ್ಸರ-ದ್ವೇಷಗಳಿಗೆ ಬೆದರಿ ನೌಕೆಯನ್ನೇರಿ ಹೊನ್ನಹಳ್ಳಿ ಯಿಂದ ಹೊರಟ ಹನುಮಣ್ಣ ವೀರಣ್ಣರು ಗಂಗವಳ್ಳಿಯನ್ನು ಸುರಕ್ಷಿತವಾಗಿ ಸೇರಿದರು. ತನ್ನ ಪ್ರಾಣವನ್ನು ಕಾಪಾಡಿದ ವೀರಣ್ಣನಿಗೆ ಗಂಗವಳ್ಳಿಯ ಅರಸು ಕೃತಜ್ಞನಾಗಿದ್ದ. ಅವನು ರಾಜಧಾನಿಯನ್ನು ಸೇರಿದ ಕೆಲದಿನ ಗಳಲ್ಲಿಯೇ, "ವೀರಣ್ಣ, ನೀವು ನನ್ನ ಮಂತ್ರಿಯಾಗಿಯೋ, ದಂಡನಾಯಕ ನಾಗಿಯೋ ಇದ್ದುಬಿಡಿ" ಎಂದು ಹೇಳಿದ.

ವೀರಣ್ಣ ಒಂದು ತಲೆಮಾರಿಗಿಂತಲೂ ಹೆಚ್ಚುಕಾಲ ಅಧಿಕಾರಪದವಿ ಗಳನ್ನು ಅಲಂಕರಿಸಿ, ಅವುಗಳನ್ನು ಸವಿದಿದ್ದ. ಈಗ ಅವನಿಗೆ ಅಧಿಕಾರದ ಮೇಲೆ ಯಾವ ವ್ಯಾಮೋಹವೂ ಇರಲಿಲ್ಲ. ಗಂಗವಳ್ಳಿಯಲ್ಲಿ ಹಳೆಯ ಮಂತ್ರಿಗಳೂ, ಸೇನಾಪತಿಗಳೂ ಇದ್ದಾರೆ. ಹೊರನಾಡಿನಿಂದ ಬಂದ ತಾನು ಈಗ ಅಧಿಕಾರವನ್ನು ಬಯಸಿದರೆ, ಅವರಿಗೆ ಅನ್ಯಾಯಮಾಡಿದಂತಾಗುವುದು; ಅವರ ಮತ್ಸರ ದ್ವೇಷಗಳಿಗೆ ಈಡಾಗಬೇಕಾಗುವುದು. ಮತ್ಸರ ದ್ವೇಷಗಳ ಅಗ್ನಿಜ್ವಾಲೆಯಿಂದ ಪಾರಾಗಲೆಂದು ತಾನು ನಾಡನ್ನು ತೊರೆದುಬಂದಿದ್ದೇನೆ; ಇಲ್ಲಿ ಮರಳಿ ಆ ಕಿಚ್ಚಿನ ಕಿಡಿಯನ್ನು ಉಡಿಯಲ್ಲಿ ಕಟ್ಟಿಕೊಳ್ಳುವುದೇಕೆ? ಎಂದು ಅವನು ಆಲೋಚಿಸಿದ. ಆದುದರಿಂದ ಅವನು ಅಧಿಕಾರದ ಗದ್ದುಗೆ ಯನ್ನೇರಲು ತವಕಪಡಲಿಲ್ಲ.

"ಇಲ್ಲ ದೊರೆಗಳೇ, ನಾನು ನಿಮ್ಮ ಆಸ್ಥಾನದಲ್ಲಿ ಒಬ್ಬ ಸಾಮಾನ್ಯನಂತೆ ಇರುವೆನು" ಎಂದು ವೀರಣ್ಣ ದೊರೆಗೆ ಹೇಳಿದ.

ಹನುಮಣ್ಣನಿಗೆ ಒಬ್ಬ ಮಗನಿದ್ದ. ಅವನ ಹೆಸರು ಈಚಣ್ಣನೆಂದು. ಅವನಿಗೆ ಎಂಟು ವರ್ಷ ಪ್ರಾಯವಾಯಿತು. ಅವನಿಗೆ ಸರಿಯಾದ ಶಿಕ್ಷಣ ವನ್ನು ಒದಗಿಸುವುದು ದೊರೆಗೊಂದು ದೊಡ್ಡ ಚಿಂತೆಯಾಯಿತು. ಶಾಸ್ತ್ರ ವಿದ್ಯೆಯನ್ನು ಕಲಿಸಲು ಅರಮನೆಯ ಗುರುಗಳಿದ್ದರು. ಆದರೆ ಶಸ್ತ್ರವಿದ್ಯೆಯಲ್ಲಿ ನಿಷ್ಣಾತರಾದ ಗುರುಗಳು ಅರಸನಿಗೆ ದೊರೆಯಲಿಲ್ಲ. ಅರಸನು ಈ ವಿಚಾರ ವನ್ನು ವೀರಣ್ಣನ ಮುಂದಿರಿಸಿದ:

"ಅರಸರೇ, ನಾನು ಶಾಸ್ತ್ರವಿದ್ಯೆಯನ್ನು ಕಲಿತವನಲ್ಲ." ವೀರಣ್ಣ ಮಾರ್ನುಡಿದ: "ಆದರೆ ಯುದ್ಧವಿದ್ಯೆಯನ್ನು ತಕ್ಕಮಟ್ಟಿಗೆ ಅಭ್ಯಾಸಮಾಡಿ ದ್ದೇನೆ. ನೀವು ಒಪ್ಪುವಿರಾದರೆ, ನಾನು ಕಲಿತ ವಿದ್ಯೆಯನ್ನು ಸಂತೋಷದಿಂದ ದೊರೆಮಗನಿಗೆ ಕಲಿಸಿಕೊಡುತ್ತೇನೆ. ನನಗೂ ಬೇಸರ ಪರಿಹಾರಕ್ಕೆ ಒಂದು ದಾರಿಯಾಯಿತು."

ವೀರಣ್ಣ ಕದನ ವಿದ್ಯೆಯಲ್ಲಿ ನಿಷ್ಣಾತನೆಂಬುದನ್ನು ಗಂಗವಳ್ಳಿಯ ಅರಸು ಬಲ್ಲ. ಶಸ್ತ್ರವಿದ್ಯೆಯಲ್ಲಿ ಅವನನ್ನು ಸರಿಗಟ್ಟುವವರು ಹೊನ್ನವಳ್ಳಿ ಮತ್ತು ಗಂಗವಳ್ಳಿ ಮಾಂಡಲಿಕ ರಾಜ್ಯಗಳಲ್ಲಿ ಮಾತ್ರವಲ್ಲ; ಹೊಯ್ಸಳ ಸಾಮ್ರಾಜ್ಯ, ದಲ್ಲಿಯೇ ಇಲ್ಲವೆಂದು ಹನುಮಣ್ಣ ದ್ವಾರಸಮುದ್ರಕ್ಕೆ ಹೋಗಿದ್ದಾಗ, ಅಲ್ಲಿನ ಜನರಾಡುವ ಮಾತನ್ನು ಅವನು ಕೇಳಿದ್ದ. ಅಲ್ಲದೆ, ವೀರಣ್ಣನ ಪೌರುಷದ ಕತೆಗಳು ಅವನ ಕಿವಿಗಳಿಗೆ ಬಿದ್ದಿದ್ದುವು. ಈಗ ವೀರಣ್ಣ ತಾನಾಗಿಯೇ ರಾಜ ಕುಮಾರನಿಗೆ ಧನುರ್ವಿದ್ಯೆಯನ್ನು ಕಲಿಸಲೊಪ್ಪಿದುದನ್ನು ಕಂಡು, ಅವನಿಗೆ ಸಂತೋಷವಾಯಿತು. ಅವನು, "ನೀವು ಅಷ್ಟೊಂದು ಉಪಕಾರಮಾಡಿ ವೀರಣ್ಣ. ನನ್ನ ಮಗನನ್ನು ಕದನವಿದ್ಯೆಯಲ್ಲಿ ಪರಿಣತನನ್ನಾಗಿ ಮಾಡಿದರೆ, ಗಂಗವಳ್ಳಿಯ ನಾಡಿಗೇ ಹಿರಿಯ ಉಪಕಾರವನ್ನೆಸಗಿದಂತಾಗುವುದು" ಎಂದು ಉಸುರಿದ.

"ದೊರೆಗಳೆ, ಇದು ಉಪಕಾರ ಮಾಡುವುದಲ್ಲ; ನಾನು ಋಣತೀರಿಸುವ ಹೊರೆಯನ್ನು ನಿರ್ವಹಿಸುತ್ತಿರುವೆನು. ನೀವು ನನಗೆ ಅನ್ನವಿತ್ತು ಸಲಹು ತ್ತಿರುವಿರಿ. ಆ ಸಾಲವನ್ನು ನಾನು ತೀರಿಸಬೇಡವೇ?" ವೀರಣ್ಣನ ಕೊರಳಿಂದ ವಿನಯದ ಮಾತು ಹೊರಟಿತು. "ಗಂಗವಳ್ಳಿಯ ಒಡೆಯರಿಗೆ ಉಪಕಾರ ಮಾಡಲು ನಾನೆಷ್ಟರವನು?"

ಒಂದು ಶುಭಮುಹೂರ್ತದಲ್ಲಿ ವೀರಣ್ಣ ರಾಜಕುಮಾರನಿಗೆ ವಿದ್ಯಾರಂಭವನ್ನು ಮಾಡಿದ. ಈಚಣ್ಣನಾದರೂ ಒಳ್ಳೆಯ ಹುಡುಗ. ಅವನು ಹಟಮಾರಿಯಲ್ಲ. ಅವನಲ್ಲಿ ಜಾಣತನ ಸಾಕಷ್ಟು ಇತ್ತು. ಅವನು ವೀರಣ್ಣನ ನರೆಗೂದಲನ್ನು ಕಂಡು, "ಅಜ್ಜ" ಎಂದು ಸಂಬೋಧಿಸುತಿದ್ದ.

ಅರಸರ ಆಜ್ಞೆಯಂತೆ ಶಿಕ್ಷಣ ಪ್ರಾರಂಭವಾಯಿತು. ವೀರಣ್ಣ ಹುಡುಗನಿಗೆ ಬಿಲ್ಲು ಹಿಡಿಯುವುದು, ಹೆದೆಯೇರಿಸುವುದು ಮತ್ತು ಬಾಣಗಳನ್ನು ಹೊಡೆಯುವುದು ಮೊದಲಾದ ವಿಷಯಗಳನ್ನು ಕಲಿಸತೊಡಗಿದ. ಈ ವಿಷಯಗಳನ್ನು ಕಲಿಯುವುದು ಈಚಣ್ಣನಿಗೆ ಪ್ರಯಾಸವಾಗಲಿಲ್ಲ. ಇವೆಲ್ಲ ಅವನಿಗೆ ಆಟಗಳಂತೆ ತೋರಿದುವು. ಅವನು ದಿನ ದಿನ ವೀರಣ್ಣ ಹೇಳಿಕೊಟ್ಟುದನ್ನೆಲ್ಲಾ ಕಲಿಯುತ್ತಾ, ಬಂದ.

ಬಿಡುವು ವೇಳೆಯಲ್ಲಿ ವೀರಣ್ಣ ರಾಜಕುಮಾರನಿಗೆ ತನ್ನ ಯುದ್ಧದ ಅನುಭವಗಳನ್ನು ಕತೆಗಳ ರೂಪದಲ್ಲಿ ವಿವರಿಸಿ ಹೇಳಿದ. ದೊರೆ ಮಗನು ಈ ಕತೆಗಳನ್ನು ಕುತೂಹಲದಿಂದ ಕೇಳುತಿದ್ದ. ವೀರಣ್ಣನ ಧೈರ್ಯ ಸಾಹಸಗಳು, ಮೃತ್ಯುವಿನ ದವಡೆಗಳೊಳಗೆ ನುಗ್ಗುವ ಕಲಿತನ ಇವುಗಳು ಈಚಣ್ಣನನ್ನು ರೋಮಾಂಚನಗೊಳಿಸಿದುವು. ಅವನ ಎಳೆಯ ಹೃದಯದಲ್ಲಿ ವೀರರಸ ವೊಸರುವಂತೆ ಮಾಡಿದುವು. ಈ ಕತೆಗಳನ್ನು ಕೇಳಿದಾಗ ಈಚಣ್ಣನಿಗೆ ತಾನೂ ವೀರಣ್ಣನಂತೆ ಧೀರನಾಗಬೇಕು; ಕೆಚ್ಚದೆಯ ಕಡುಗಲಿಯಾಗಬೇಕು ಎಂಬ ಆಶೆ ಉದಿಸತೊಡಗಿತು. ಸುಪ್ತ ಮನಸ್ಸಿನಲ್ಲಿ ಜಾಗೃತಿಗೊಂಡ ಈ ಆಶೆ ಧನುರ್ವಿದ್ಯೆಯನ್ನು ಕಲಿಯುವುದರಲ್ಲಿ ಅವನಿಗಿರುವ ಶ್ರದ್ಧೆಯನ್ನು ಹೆಚ್ಚಿಸತೊಡಗಿತು.

ಈಚಣ್ಣ ರಣ ವಿದ್ಯೆಗಳನ್ನು ಒಂದೊಂದಾಗಿ ಕಲಿತ. ಕುದುರೆಯೇರುವುದು, ತೇರು ನಡೆಸುವುದು, ಆನೆ ಕಾಳಗ, ಕತ್ತಿ ಬೀಸುವುದು, ಲಕ್ಷ್ಯಭೇದನೆ ಇತ್ಯಾದಿ ಶಸ್ತ್ರಕಲೆಗಳನ್ನು ಒಂದೊಂದಾಗಿ ಅಭ್ಯಾಸಮಾಡಿದ. ಹತ್ತು ವರ್ಷಗಳ ಕಾಲದ ನಿರಂತರ ಅಭ್ಯಾಸಗಳು ಅವನನ್ನು ಕದನ ವಿದ್ಯಾಕುಶಲನನ್ನಾಗಿ ಮಾಡಿದುವು. ರಣವಿದ್ಯೆಯಲ್ಲಿ ಶಿಷ್ಯನು ಸಂಪಾದಿಸಿದ ಅಳವನ್ನು ಕಂಡು ವೀರಣ್ಣ ಅಭಿಮಾನ ತಾಳಿದ.

ಶಸ್ತ್ರವಿದ್ಯಾಶಿಕ್ಷಣ ಮುಗಿಯಿತು. ವೀರಣ್ಣ ದೊರೆಯೊಡನೆ, "ರಾಜಕುಮಾರನು ಯುದ್ಧ ವಿದ್ಯೆಯಲ್ಲಿ ನನಗೆ ಸಾಟಿಯಾಗಿರುವನು." ಎಂದು ಹೇಳಿದ.

"ಇನ್ನು ಗುರುದಕ್ಷಿಣೆಯನ್ನು ಕೇಳಲು ನಾನು ಬಂದಿಲ್ಲ." ವೀರಣ್ಣ ಮಾರ್ನುಡಿದ: "ಅದನ್ನು ಕೇಳುವ ಅಧಿಕಾರವಿರುವುದು ಪಾರ್ವರಿಗೆ."

ರಾಜಕುಮಾರನು ಕಲಿತ ವಿದ್ಯೆಗಳ ಪ್ರದರ್ಶನ ಅರಸನ ಮುಂದೆ ನಡೆಯಿತು. ಮಗನು ಕಲಿತ ವಿದ್ಯೆಯನ್ನು ಕಂಡು ದೊರೆ ಮೆಚ್ಚಿದ. ಮಗನನ್ನು ಶಸ್ತ್ರ ವಿದ್ಯಾನಿಷ್ಣಾತನನ್ನಾಗಿ ಮಾಡಿದ ವೀರಣ್ಣನನ್ನು ಅರಸನು ಮುಕ್ತ ಕಂಠದಿಂದ ಪ್ರಶಂಸಿಸಿ ಉಡುಗೊರೆಗಳನ್ನಿತ್ತು ಸನ್ಮಾನಿಸಿದ.

ವೀರಣ್ಣ ಗಂಗವಳ್ಳಿಗೆ ಬಂದು ಹತ್ತು ವರ್ಷಗಳಿಗಿಂತಲೂ ಹೆಚ್ಚುಕಾಲ ಕಳೆದಿತ್ತು. ಆಗಾಗ ಅವನಿಗೆ ಸ್ವದೇಶದ ನೆನಪಾಗುತಿದ್ದಿತು. ಹುಟ್ಟಿನಾಡಿಗೆ ಮರಳಬೇಕೆಂದು ಅವನಿಗೆ ಆಶೆಯಾಗುತಿದ್ದಿತು. ಮತ್ಸರದ ಮಂಜು ಕವಿದ ಸಾಂತಣ್ಣನ ಮನಸ್ಸು ತಿಳಿಯಾದೀತು, ದೊರೆ ತನ್ನ ತಪ್ಪುಗಳನ್ನು ಅರಿತಾನು ಎಂದು ವೀರಣ್ಣನ ಅಂತರಂಗ ನುಡಿಯುತಿದ್ದಿತು.

ವೀರಣ್ಣನ ನಿರೀಕ್ಷೆ ಸುಳ್ಳಾಗಲಿಲ್ಲ. ಈ ಹತ್ತು ವರ್ಷಗಳ ಅವಧಿಯಲ್ಲಿ ಸಾಂತಣ್ಣನ ಎದೆ ಪಶ್ಚಾತ್ತಾಪಾಗ್ನಿಯಲ್ಲಿ ಬೆಂದು ಬಂಗಾರವಾಗಿದ್ದಿತು. ಅವನು ವ್ಯಥೆಪಟ್ಟುದಕ್ಕೆ ಮಿತಿಯಿರಲಿಲ್ಲ. ಅವನು ಕೊನೆಗೆ ದೂತನ ಮೂಲಕ ಗಂಗವಳ್ಳಿಯಲ್ಲಿದ್ದ ವೀರಣ್ಣನಿಗೊಂದು ಪತ್ರ ಕಳುಹಿದ. ಅವನು ಆ ಓಲೆಯಲ್ಲಿ, ತಾನು ಮಾಡಿದ ಅಪರಾಧವನ್ನು ಮನ್ನಿಸಬೇಕೆಂದೂ, ಹೊನ್ನಹಳ್ಳಿಗೆ ಐತಂದು ಮಂತ್ರಿಪದವಿಯನ್ನು ಅಲಂಕರಿಸಬೇಕೆಂದೂ ಬೇಡಿಕೊಂಡಿದ್ದ.

ಈ ಓಲೆ ದೊರೆತ ಮೇಲೆ ಹೊನ್ನವಳ್ಳಿಗೆ ಮರಳಬೇಕೆಂಬ ಆಸೆ ವೀರಣ್ಣನಲ್ಲಿ ಪ್ರಬಲವಾಗುತ್ತಾ ಬಂತು. ಅವನು ಹೊನ್ನವಳ್ಳಿಯಿಂದ ಬಂದ ಓಲೆಯನ್ನು ಹನುಮಣ್ಣನಿಗೆ ತೋರಿಸಿದ. ಗಂಗವಳ್ಳಿಯ ದೊರೆ ಆ ಪತ್ರವನ್ನು ಓದಿ ನೋಡಿ, "ಸಾಂತಣ್ಣನ ಮನಸ್ಸು ಮಾರ್ಪಾಟು ಆದ ಹಾಗೆ ತೋರುವುದು. ಆದರೆ ನೀವು ದುಡುಕಿ ಹೊನ್ನಹಳ್ಳಿಗೆ ಹೋಗುವುದು ಸರಿಯಲ್ಲ. ನಿಮ್ಮನ್ನು ಹೊನ್ನಹಳ್ಳಿಗೆ ಬರುವಂತೆ ಮಾತಾಡಲು ಹೂಡಿದ ಸಂಚು ಆಗಿರಲೂ ಸಾಕು!" ಎಂದು ನುಡಿದ.

"ನನ್ನನ್ನು ಕೊಲ್ಲುವುದರಿಂದ ದೊರೆಯುವ ಲಾಭವಾದರೂ ಏನು?"

"ವೀರಣ್ಣ, ಪ್ರತೀಕಾರ ಬುದ್ಧಿಗೆ ವಿವೇಕ ವಿವೇಚನೆಗಳಿಲ್ಲ. ಕಾಡು ಬೆಂಕಿ ಮುಳ್ಳುಪೊದೆಗಳನ್ನು ಸುಡುವುದು; ಜತೆಯಲ್ಲೇ ಶ್ರೀ ಗಂಧವನ್ನೂ ಸುಡುವುದು." ಹನುಮಣ್ಣ ಸಮಾಧಾನವಿತ್ತ: "ನೀವು ಇನ್ನೂ ಕೆಲಕಾಲ

ಇಲ್ಲಿಯೇ ಇರಿ. ನಾನು ಕೆಲವು ಮಂದಿ ಗೂಢ ಚಾರರನ್ನು ಹೊನ್ನಹಳ್ಳಿಗೆ ಕಳುಹಿಸುವೆನು. ಅವರು ಅಲ್ಲಿಯ ಯಥಾರ್ಥ ಸ್ಥಿತಿಗತಿಗಳನ್ನು ತಿಳಿದು ಬರುವರು."

ದೊರೆಯ ಸೂಚನೆಗಳನ್ನು ವೀರಣ್ಣ ಒಪ್ಪಬೇಕಾಯಿತು. ಅವನು ಹುಟ್ಟಿನಾಡನ್ನು ನೆನೆಯುತ್ತಾ ದಿನಗಳನ್ನು ಕಳೆಯ ತೊಡಗಿದ.

ಈಚಣ್ಣ ಪ್ರಾಯ ಪ್ರಬುದ್ಧನಾಗಿ ಯುವರಾಜನಾದ. ಅವನು ದಿನಕ್ಕೊಮ್ಮೆಯಾದರೂ ವೀರಣ್ಣನ ವಸತಿಗೆ ಬಂದು ಅವನೊಡನೆ ನಾಲ್ಕು ಮಾತುಗಳನ್ನು ಆಡದೆ ಇರುತಿರಲಿಲ್ಲ. ತಿಳಿಮನಸ್ಸಿನ ಯುವರಾಜನ ಮಾತುಗಳನ್ನು ಕೇಳುವಾಗ ವೀರಣ್ಣನ ಹೃದಯ ಉಲ್ಲಾಸತಾಳುತಿದ್ದಿತು. ಆವನು ಈಚಣ್ಣನನ್ನು ರತ್ನಗಂಬಳಿಯ ಮೇಲೆ ಕುಳ್ಳಿರಿಸಿ, "ಬಾ, ಈಚಣ್ಣ; ಚದುರಂಗ ಆಡೋಣ. ಚದುರಂಗ ಅರಸುಗಳ ಆಟ. ಚದುರಂಗದಲ್ಲಿ ನೀನು ನಿಪುಣನಾದರೆ, ನಾಡನ್ನು ಆಳಲೂ ನೀನು ಶಕ್ತನಾಗಬಲ್ಲೆ." ಎಂದು ಸಲುಗೆಯಿಂದ ಮಾತಾಡುತಿದ್ದ. ವೃದ್ಧ ಯೋಧನ ಕೋರಿಕೆಯಂತೆ ಈಚಣ್ಣನಾದರೂ ಒಂದೆರಡು ಆಟಗಳನ್ನು ಆಡುತಿದ್ದ.

ಇತ್ತೀಚೆ ನಾಲ್ಕಾರು ದಿನಗಳಿಂದ ಈಚಣ್ಣ ವೀರಣ್ಣನ ಮಂದಿರದ ಕಡೆ ಸುಳಿದಿರಲಿಲ್ಲ. ಅರಮನೆಯಲ್ಲಿ ವಿಚಾರಿಸಿದಾಗ ಬೇಟೆಗೆ ಹೋದ ರಾಜಕುಮಾರ ಮರಳಿ ಬಂದಿಲ್ಲವೆಂದು ಅವನಿಗೆ ತಿಳಿಯಿತು. ಆರು ದಿನಗಳ ಅನಂತರ ಈಚಣ್ಣ ಬೇಟೆಯನ್ನು ಮುಗಿಸಿಕೊಂಡು ರಾಜಧಾನಿಗೆ ಮರಳಿದ. ಅವನು ವೀರಣ್ಣನಿಗೆ ಕಾಣಿಸಿಕೊಂಡ.

"ಏನು ಈಚಣ್ಣ? ಈಗೀಗ ನಿನ್ನನ್ನು ಕಾಣುವುದೇ ಅಪೂರ್ವವಾಗಿದೆಯಲ್ಲ!" ಎಂದು ವೀರಣ್ಣ ಕೇಳದಿರಲಿಲ್ಲ.

"ಏನೂ ಇಲ್ಲ. ಅರಮನೆಯಲ್ಲೇ ಇದ್ದು ಬೇಸರವಾಯಿತು." ಈಚಣ್ಣ ಉತ್ತರಿಸಿದ: "ಹಳ್ಳಿಗಳಲ್ಲಿ ಅಡ್ಡಾಡಿ ಬರೋಣವೆಂದು ಬೇಟೆಯ ನೆಪಮಾಡಿಕೊಂಡು ಹೋಗಿದ್ದೆ."

ಈಚಣ್ಣನ ಮೊಗ ಎಂದಿನಂತೆ ಗೆಲುವಾಗಿರಲಿಲ್ಲ. ಕಣ್ಣುಗಳಲ್ಲಿ ಚಿಂತೆಯ ಕಣಗಳು ತೇಲುತ್ತಿರುವಂತೆ ವೀರಣ್ಣನಿಗೆ ತೋರಿತು.

"ಈಚಣ್ಣ, ನೀನೇನೋ ಗಾಢವಾಗಿ ಆಲೋಚಿಸುತ್ತಿರುವ ಹಾಗೆ ತೋರುವುದು."

"ಆಲೋಚನೆ! ನಾನು ಆಲೋಚಿಸಬೇಕಾದುದೇನಿದೆ!" ಈಚಣ್ಣ ತುಟಿಗಳ ಮೇಲೆ ನಗೆಯನ್ನು ತಂದುಕೊಂಡ. ಆದರೆ ಅದು ಪ್ರಯತ್ನಪೂರ್ವಕ ವಾಗಿ ತಂದುಕೊಂಡ ನಗುವೆಂದು ವೀರಣ್ಣನಿಗೆ ಅರಿವಾಗದಿರಲಿಲ್ಲ.

"ಈಚಣ್ಣ ಬಾ. ಎರಡು ಚದುರಂಗ ಆಡೋಣ." ಎಂದು ವೀರಣ್ಣ ರಾಜಕುಮಾರನನ್ನು ಬಲನಂತಮಾಡಿದ. ಈಚಣ್ಣನ ಮನಸ್ಸು ಏಕಾಂತ ವನ್ನು ಬಯಸುತಿದ್ದಿತು. ಆದರೆ ಅಜ್ಜನ ಕೋರಿಕೆಯನ್ನು ಅಲ್ಲಗಳೆಯಲಾಗ ಲಿಲ್ಲ. ಅವನು ಅಜ್ಜನೊಡನೆ ಚದುರಂಗ ಆಡಬೇಕಾಯಿತು.

ಆಟದಲ್ಲಿ ಈಚಣ್ಣನಿಗೆ ಉತ್ಸಾಹವಿರಲಿಲ್ಲ. ಅವನ ಕಣ್ಣುಗಳು ಚದು ರಂಗದ ಕಾಯಿಗಳನ್ನು ನೋಡುತಿದ್ದರೂ, ಅವನ ಚಿತ್ತ ಮಾತ್ರ ಬೇರೇನನ್ನೋ ನೋಡುತ್ತಿದ್ದಿತು. ಎರಡು ಆಟಗಳಲ್ಲಿಯೂ ಅವನೇ ಸೋತ. ರಾಜ ಕುಮಾರನ ಸೋಲನ್ನು ಕಂಡ ವೀರಣ್ಣ, "ಎಲ್ಲಾ ಚಿಂತೆಗಳನ್ನು ನೀಗಿಕೊಂಡ ನಾನು, ಚಿಂತೆಯ ಸುಳಿವಿಲ್ಲದ ನೀನು, ಹೀಗೆ ನಾವಿಬ್ಬರು ಚಿಂತೆಯ ಹಂಗಿ ಗೊಳಗಾಗದೆ ಇದ್ದೆವು. ಈಗ ನೀನೂ ಚಿಂತೆಯ ಸುಳಿಯಲ್ಲಿ ಸಿಕ್ಕಿದ ಹಾಗಿದೆ ಯಲ್ಲ!" ಎಂದು ನಗೆ ಬೆರಸಿದ ನುಡಿಯನ್ನಾಡಿದ.

ಈಚಣ್ಣ ಏನನ್ನೋ ಉಸುರಬೇಕೆಂದು ತುಟಿದೆರೆದ. ಆದರೆ ಅವನು ನಾಲಗೆ ತುದಿಗೆ ಬಂದ ಮಾತನ್ನು ಆಡದೆ ತುಟಿಯನ್ನು ಕಚ್ಚಿಕೊಂಡ. ಅವನು, "ಅಜ್ಜ, ನಾಳೆ ಬರುವೆನು" ಎಂದು ಹೇಳಿ ಹೊರಟು ಹೋದ.

ಹತ್ತೆಂಟು ದಿನಗಳು ಸಾಗಿದುವು. ಈಚಣ್ಣ ಮರಳಿ ರಾಜಾಸ್ಥಾನದಲ್ಲಿ ಕಾಣದಾದ. ಹಿಂದಣ ಸಲ ಒಡನಾಡಿಗಳಾಗಿ ನಾಲ್ಕಾರು ಮಂದಿ ಸೈನಿಕರಿ ದ್ದರು. ಈ ಸಲ ಅವನು ಸಂಗಡ ಯಾರನ್ನೂ ಕರೆದುಕೊಂಡು ಹೋಗಿರಲಿಲ್ಲ. ಅವನೆಲ್ಲಿಗೆ ತೆರಳಿದನೆಂಬುದು ಯಾರಿಗೂ ತಿಳಿಯದು. ಈಚಣ್ಣ ಹೀಗೆ ಮಾಯವಾದುದು ವೀರಣ್ಣನಿಗೆ ಆಶ್ಚರ್ಯವನ್ನುಂಟುಮಾಡಿತು. ಅವನು "ರಾಜಕುಮಾರರು ಕಾಣುವುದಿಲ್ಲವಲ್ಲ." ಎಂದು ಉದ್ಗಾರವೆತ್ತಿದ.

"ರಾಜಕುಮಾರನ ಸ್ವಭಾವ ಈಗೀಗ ಬಹು ವಿಚಿತ್ರವಾಗ ತೊಡಗಿದೆ." ದೊರೆ ಚಿಂತೆ ಬೆರೆತ ಸ್ವರದಲ್ಲಿ ಮಾರ್ನುಡಿದ: "ವೀರಣ್ಣ, ಅವನ ವರ್ತನೆ ನನಗೆ ಅರ್ಥವಾಗುವುದಿಲ್ಲ. ಅವನಿಗೆ ಅರಮನೆಯೇ ಬೇಸರ ಬಂದಹಾಗಿದೆ. ಯಾರೊಡನೆಯೂ ಹೆಚ್ಚು ಮಾತಾಡುವುದಿಲ್ಲ. ಸರಿಕರೊಡನೆ ಆಟ ವಿನೋದ ಗಳಿಲ್ಲ. ಏನೋ ಯೋಚನೆ ಕಟ್ಟಿಕೊಂಡ ಹಾಗಿದೆ."

"ದೊರೆಗಳೇ, ನೀವು ಒಂದು ಒಳ್ಳೆಯ ಹೆಣ್ಣು ನೋಡಿ ರಾಜಕುಮಾರರಿಗೆ ಮದುವೆ ಮಾಡಿಬಿಡುವುದು ಒಳ್ಳೆಯದು." ವೀರಣ್ಣನ ಕೊರಳಿಂದ ಸಲಹೆ ಹೊರಟಿತು.

"ಅದೂ ನಿಜ. ಆದರೆ ಅನುರೂಪಳಾದ ಕನ್ಯೆ ದೊರೆಯಬೇಕಲ್ಲ!" ಎಂದು ಅರಸ ಚಿಂತಾಭರಿತ ಉದ್ಗಾರವೆತ್ತಿದ.

ಕೆಲವು ದಿನಗಳು ಕಳೆದುವು. ಒಂದು ದಿನ ಮುಂಜಾನೆ ಅರಸು ಚಾರರರನ್ನು ಅಟ್ಟಿ ವೀರಣ್ಣನನ್ನು ಮಂತಣದ ಸಾಲೆಗೆ ಕರೆಸಿಕೊಂಡ. ಅರಸು ತುಂಬಾ ಆಲೋಚನೆಯಲ್ಲಿ ಇರುವ ಹಾಗೆ ವೀರಣ್ಣನಿಗೆ ತೋರಿತು. ಅವನು ಹಣೆಯ ಮೇಲೆ ಕೈಯಿರಿಸಿ, "ವೀರಣ್ಣ ಏನು ಮಾಡಬೇಕೆಂಬುದು ನನಗೆ ತಿಳಿಯದಾಗಿದೆ." ಎಂದು ಭಾರವಾದ ಸ್ವರದಲ್ಲಿ ನುಡಿದ.

"ಅಂತಹ ಚಿಂತೆಗೆ ಕಾರಣವಾದ ವಿಷಯ ಯಾವುದು ದೊರೆಗಳೇ?"

"ಅದೇ ನಮ್ಮ ಯುವರಾಜರ ಸಮಾಚಾರ!"

"ಯುವರಾಜರು ಏನು ಮಾಡಿದರು?"

"ದೊಡ್ಡ ಪ್ರಮಾದವನ್ನೇ ಮಾಡಿದ್ದಾರೆ."

"ಆದೇನೆಂದು ನಾನು ತಿಳಿಯ ಬಹುದೇ?"

"ಅದಕ್ಕೋಸ್ಕರವೇ ನಿಮ್ಮನ್ನು ಕರೆಯಿಸಿದೆ." ದೊರೆ ಮಾತಿಗೆ ಮುನ್ನುಡಿ ಹಾಕಿದ: "ರಾಜಕುಮಾರನ ವರ್ತನೆಗಳಲ್ಲಿ ನನಗೆ ಮೊದಲಿನಿಂದಲೂ ಅನುಮಾನ ಬಂದಿತ್ತು. ಈಗ ಅವನು ತಿಂಗಳಲ್ಲಿ ಹದಿನೈದು ದಿನ ಅರಮನೆಯಲ್ಲಿ ಉಳಿಯುತ್ತಲಿಲ್ಲ. ಅವನು ಎಲ್ಲಿಗೆ ಹೋಗುತ್ತಾನೆ; ಏನು ಮಾಡುತ್ತಾನೆ ಎಂದು ತಿಳಿಯುವ ಕುತೂಹಲ ನನ್ನಲ್ಲಿ ಹೆಚ್ಚಿತು. ಆದುದರಿಂದ ಆತನ ಹೋಗು ಬರವುಗಳ ಮೇಲೆ ಕಣ್ಣಿಡಬೇಕೆಂದು ಗೂಢಚಾರರಿಗೆ ಅಪ್ಪಣೆ ಮಾಡಿದೆ. ಅದರಂತೆ ಅವರು ರಾಜಕುಮಾರನ ಕೆಲಸಗಳನ್ನೆಲ್ಲಾ ಸೂಕ್ಷ್ಮವಾಗಿ ವಾಗಿ ನೋಡುತಿದ್ದಾರೆ."

"ಅವರೇನಾದರೂ ವಿಶೇಷ ಸುದ್ದಿಯನ್ನು ತಂದರೇ?" ವೀರಣ್ಣ ನಡುವೆ ಬಾಯಿ ಹಾಕಿದ.

"ಅವರು ತಂದ ವಾರ್ತೆಯೇ ನನಗೆ ತಲೆ ನೋವು ಉಂಟು ಮಾಡಿರುವುದು." ಅರಸನು ಮಾತು ಮುಂದುವರಿಸಿದ: "ದೊರೆ ಮಗನು ಇಂತಹ ಹೆಡ್ಡನೆಂದು ನಾನು ಬಗೆದಿರಲಿಲ್ಲ. ಅವನ ಗೋಪ್ಯ ಕಾರ್ಯಗಳೆಲ್ಲ ಗೂಢ

ಚಾರರಿಂದ ಬಯಲಾದುವು. ಅದು ಯಾವುದೋ ಒಂದು ಹಳ್ಳಿಯಂತೆ. ಅಲ್ಲೊಬ್ಬ ಮುದುಕ ಬೇಸಾಯಗಾರನಿರುವನಂತೆ. ರಾಜಕುಮಾರ ಒಬ್ಬ ಬಡ ರೈತನ ವೇಷಧರಿಸಿ ಅವನಲ್ಲಿಗೆ ಹೋಗುತಿದ್ದಾನಂತೆ. ಆ ಮುದುಕನಿಗೊಬ್ಬ ಮಗಳಿರುವಳಂತೆ."

"ರಾಜಕುಮಾರರು ಆ ಹೆಣ್ಣನ್ನು ಮೆಚ್ಚಿದ ಹಾಗಿದೆ."

"ಅವಳನ್ನು ಮೆಚ್ಚಿದುದು ಮಾತ್ರವಲ್ಲ; ಅವನು ಅವರ ಆಳಾಗಿಯೂ ಇದ್ದಾನೆ." ದೊರೆಯ ಸ್ವರ ವ್ಯಥೆ ಮತ್ತು ಮುನಿಸುಗಳಿಂದ ಭಾರವಾಯಿತು. "ಈಚಣ್ಣ ಹಳ್ಳಿಗನ ವೇಷಹಾಕಿಕೊಂಡು ಒಕ್ಕಲಿಗನ ಗದ್ದೆಗಳಲ್ಲಿ ದುಡಿಯುತ್ತಿರುವನಂತೆ; ಗದ್ದೆಯನ್ನು ಉಳುವನಂತೆ; ಗೊಬ್ಬರವನ್ನು ಹೊರುವನಂತೆ; ಆ ಹೆಣ್ಣಿನ ಮುಂದೆ ಕುಳಿತು ಅವಳ ಹಾಡಿಗೆ ಸರಿಯಾಗಿ ಕೊಳಲನ್ನು ಬಾರಿಸುತ್ತಾ ಚಕ್ಕಂದವಾಡುತ್ತಿರುವನಂತೆ. ಅವರು ಹೇಳುವ ಕತೆ ಕೇಳುವಾಗ ನನ್ನ ಮಗರಾಯನಿಗೆ ಮರುಳು ಹಿಡಿದಂತೆ ತೋರುವುದು."

"ರಾಜಕುಮಾರರು ವಿವೇಕಿಗಳು; ಮತಿಯಿಲ್ಲದೆ ದುಡುಕುವವರಲ್ಲ. ಅವರ ಬಗೆಯನ್ನು ಸೆಳೆಯ ಬೇಕಾದರೆ ಆ ಹೆಣ್ಣು ಮಗಳು ಚೆಲುವೆಯೂ, ಜಾಣೆಯೂ ಆಗಿರಬೇಕು." ಆಲೋಚನೆ ಮಾಡುತ್ತಾ ವೀರಣ್ಣ ಹೇಳಿದ: "ಅವಳು ಈಚಣ್ಣ ಒಡೆಯರಿಗೆ ತಕ್ಕವಳಾಗಿಯೇ ಇರಬೇಕು."

"ವೀರಣ್ಣ, ನೀವು ಹೇಳುತ್ತಿರುವ ಮಾತು ನಿಜವಿರಬಹುದು."

"ರಾಜಕುಮಾರರು ಮೆಚ್ಚಿದ ಹೆಣ್ಣು ಚೆಲುವೆಯೂ ಜಾಣೆಯೂ ಆಗಿದ್ದರೆ ಅವಳನ್ನೇ ಈಚಣ್ಣ ಒಡೆಯರಿಗೆ ಲಗ್ನ ಮಾಡಬಹುದಲ್ಲ!"

"ವೀರಣ್ಣ, ನೀವೇನು ಹೇಳುವಿರಿ? ಜನ ನಕ್ಕಾರು!" ಮುನಿಸಿನಿಂದ ಕಾವೇರಿದ ಧ್ವನಿ ದೊರೆಯ ಕೊರಳಿಂದ ಹೊರಟಿತು: "ಅರಸು ಕುಲದವನಿಗೆ ಬೇಸಾಯಗಾರನ ಹೆಣ್ಣನ್ನು ತರುವುದೇ?"

"ದೊರೆಗಳು ದುಡುಕಿ ಮುನಿಸಿನ ಕೈಯಲ್ಲಿ ಮತಿಯನ್ನು ಒಪ್ಪಿಸುವುದು ಒಳ್ಳಿತಲ್ಲ." ವೀರಣ್ಣ ಸಲಹೆ ನೀಡಿದ: "ದುಡುಕುವುದರಿಂದ ಕೇಡಾಗುವುದೇ ಹೆಚ್ಚು."

"ವೀರಣ್ಣ, ನೀವು ರಾಜಕುಮಾರನ ಪಕ್ಷವನ್ನು ವಹಿಸಿ ಮಾತಾಡುತ್ತಿರುವಿರಿ."

"ಹಾಗೇನಿಲ್ಲ. ಆದರೆ ಗುರುವಿಗೆ ಶಿಷ್ಯನ ಮೇಲೆ ಮಮತೆಯಿರುವುದು

ಸ್ವಾಭಾವಿಕ." ವೀರಣ್ಣ ಚಿಂತಾಮಗ್ನನಾಗಿ ಹೇಳತೊಡಗಿದ: ಈಚಣ್ಣ ಒಡೆಯರಿಗೆ ಬಿಲ್ಲು ವಿದ್ಯೆಯನ್ನು ಕಲಿಸಿದವನು ನಾನಲ್ಲವೇ? ಅವರ ಗುಣ ಸ್ವಭಾವಗಳನ್ನು ಚೆನ್ನಾಗಿ ಬಲ್ಲೆ. ಅವರು ತಮ್ಮ ಅಂತಸ್ತಿಗೆ ಕುಂದುತರುವ ಕೆಲಸಗಳಿಗೆ ಕೈಹಾಕುವವರಲ್ಲ. ತಮ್ಮ ಕುಲದ ಹಿರಿಮೆಗೆ, ಗಂಗವಳ್ಳಿಯ ಸಿಂಹಾಸನದ ಗೌರವಕ್ಕೆ ತಕ್ಕಂತೆ ನಡೆಯುವರೆಂಬ ಭರವಸೆ ನನಗಿದೆ."

"ಅದನ್ನೇ ನಾನೂ ಆಲೋಚಿಸುತ್ತಿರುವುದು. ಈಚಣ್ಣ ಮೆಚ್ಚಿದ ಹೆಣ್ಣು ಹೇಗಿರುವಳೆಂಬುದನ್ನು ನೋಡಬೇಕೆಂಬ ಕುತೂಹಲ ನನಗುಂಟಾಗಿದೆ." ದೊರೆ ಪಡಿನುಡಿದ: "ಮಗರಾಯ ಇನ್ನೊಮ್ಮೆ ಅದೃಶ್ಯನಾದಾಗ ನಾವು ವೇಷ ವನ್ನು ಮರೆಮಾಜಿ, ಅವನನ್ನು ಬೆನ್ನಟ್ಟೋಣ. ದಾರಿ ತೋರಿಸಿಕೊಡಲು ದೂತನು ಹೇಗೂ ಇದ್ದಾನೆ."

"ಆಗಬಹುದು ದೊರೆಗಳೇ." ವೀರಣ್ಣ ಅರಸನ ಸೂಚನೆಯನ್ನು ಒಪ್ಪಿದ. "ಆದರೆ ಒಡೆಯರೇ, ನೀವು ದುಡುಕಬಾರದು. ನೀವು ತಾಳ್ಮೆಯಿಂದ ನಡೆದುಕೊಳ್ಳಬೇಕು."

"ವೀರಣ್ಣ, ನಾನು ಸಾಂತಣ್ಣ ದೊರೆಯಲ್ಲ." ಎಂದು ಅರಸನು ನಕ್ಕ.

---

## ಹದಿನಾಲ್ಕು

ಕಲ್ಲೂರಿನಲ್ಲಿ ಲಿಂಗಯ್ಯನ ಮನೆಯಲ್ಲಿ ಹೊಸ ಅಕ್ಕಿ ಊಟದ ಹಬ್ಬ. ಮಂಜಕ್ಕ ಮನೆಯನ್ನು ತಳಿರುತೋರಣಗಳಿಂದ ಅಲಂಕರಿಸಿದ್ದಳು. ಹಿಂದಣ ದಿನವೇ ಅವಳು ಜಗಲಿಗೆ ಕರಿಯನ್ನು ಸೇರಿಸಿ ಬಳಿದಿದ್ದಳು. ಕಪ್ಪಗೆ ತೋರುವ ಜಗಲಿ ಕನ್ನಡಿಯಂತೆ ನುಣುಪಾಗಿ ಮಿರುಗುತಿದ್ದಿತು. ಅಂಗಳ ತುಂಬಾ ಅವಳು ಬಗೆಬಗೆಯ ರಂಗೋಲೆಗಳನ್ನು ಬಳಿದಿದ್ದಳು. ಲಿಂಗಯ್ಯ ತನ್ನ ನೆರೆಹೊರೆಯ ನಾಲ್ಕೆಂಟು ಮಂದಿ ರೈತರಿಗೆ ಆಮಂತ್ರಣವನ್ನು ನೀಡಿದ್ದ. ಅವರೆಲ್ಲ ಮಡದಿ ಮಕ್ಕಳೊಡನೆ ಮುಂಜಾನೆಯೇ ಲಿಂಗಯ್ಯನ ಮನೆಗೆ ಆಗಮಿಸಿದ್ದರು. ಹೆಂಗಸರು ಮನೆಯೊಳಗೆ ಸೇರಿ, ಆ ಹಬ್ಬದ ಅಡುಗೆಗಳನ್ನು ಮಾಡಲು ಮಂಜಕ್ಕನಿಗೆ ನೆರವಾಗುತಿದ್ದರು. ಗಂಡಸರು ಜಗಲಿಯ ಮೇಲೆ ಹಾಸಿದ ಹಸೆಗಳ ಮೇಲೆ ಕುಳಿತು ತಾಂಬೂಲವನ್ನು ಮೆಲ್ಲುತಿದ್ದರು; ಹಳ್ಳಿಯ ಮತ್ತು ನಾಡಿನ ವಾರ್ತೆಗಳನ್ನು ಹರಟುತಿದ್ದರು. ಮಕ್ಕಳು ಅಂಗಣದಲ್ಲಿ

ಆಡುತಿದ್ದರು; ಹಾಡುತಿದ್ದರು; ಅಳುತಿದ್ದರು. ಹೀಗೆ ದಿನ ಹಿಂದೆ ನಿಶಬ್ದವಾಗಿದ್ದ ಮನೆ ಸಡಗರ ಗದ್ದಲಗಳ ಸಂತೆಯಾಗಿ ಪರಿಣಮಿಸಿತು.

ಹಗಲು ಒಂದು ಜಾವ ಕಳೆದಾಗ ಕೆಂಪಡರಿದ ಮೋರೆಯೊಡನೆ ಸಂಗಣ್ಣ ಬಂದ. ಅವನ ಮೊಗದಿಂದ ಧಾರಾಕಾರವಾಗಿ ಬೆವರು ಸುರಿಯುತಿದ್ದಿತು. ಎದೆಯಿಂದ ಬಿಸಿಯುಸಿರುಗಳು ಹೊಮ್ಮುತಿದ್ದುವು. ಮೈ ಕೈಗಳಿಗೆ ಧೂಳು ಅಂಟಿಕೊಂಡಿತ್ತು. ಅವನ ಇರವು ಆತ ಬಹುದೂರದಿಂದ ನಡೆದು ಬಂದಿರುವನೆಂಬುದನ್ನು ಸಾರಿ ಹೇಳುತಿದ್ದಿತು.

"ಬಾರಣ್ಣಾ, ಬಾ." ಎಂದು ಲಿಂಗಯ್ಯ ಅವನನ್ನು ಪ್ರೀತಿಯಿಂದ ಕರೆದು ಚಾಪೆಯ ಮೇಲೆ ಕುಳ್ಳಿರಿಸಿದ. ಅವನು ಮನೆಯೊಳಗೆ ಅಡುಗೆ ಗೈಮೆಯಲ್ಲಿ ನಿರತಳಾಗಿದ್ದ ಮಗಳನ್ನು ಕೂಗಿದ. "ಲೇ ಮಂಜೂ, ಸಂಗಣ್ಣ ದಣಿದು ಬಂದವ್ನೆ. ಆತನಿಗೆ ಪಾನ್ಕ ತಾ."

ತಾನು ಹಿಂದಿನ ದಿನವೇ ಬರುವೆನೆಂದು ಸಂಗಣ್ಣ ಮಂಜಕ್ಕ ಲಿಂಗಯ್ಯರಿಗೆ ಹೇಳಿದ್ದ. ಆದರೆ ಆತ ಬಾರದಿದ್ದುದು ಮಂಜಕ್ಕನಿಗೆ ಬೇಸರವನ್ನು ಒದಗಿಸಿದ್ದಿತು. ಬೆಳಕು ಹರಿದು ಒಂದು ಜಾವವಾದರೂ ಆತ ಗೋಚರಿಸದುದರಿಂದ ಅವಳು ನಿರಾಶೆಗೊಂಡಿದ್ದಳು. ಈಗ "ಸಂಗಣ್ಣ ಬಂದವ್ನೆ." ಎಂಬ ತಂದೆಯ ನುಡಿ ಅವಳ ಬೇಸರಿಕೆಯನ್ನು ಹೊಡೆದಟ್ಟಿತು. ಅವಳ ಮೊಗ ಗ್ರಹಣ ಕಳೆದ ಚಂದ್ರನಂತೆ ಪ್ರಕಾಶಮಾನವಾಯಿತು. ಅವಳು ಬೆಳ್ಳಿಯ ಗಿಂಡಿಯಲ್ಲಿ ನಿಂಬೆ ಹಣ್ಣಿನ ಪಾನಕವನ್ನು ತೆಗೆದುಕೊಂಡು ಬಂದು ದಣಿದು ಬಂದ ಸಂಗಣ್ಣನಿಗೆ ಕೊಟ್ಟಳು. ಅವಳು ಸಂಗಣ್ಣ ಉಡುಗೊರೆಗೊಟ್ಟ ಜರತಾರಿ ಸೀರೆಯನ್ನುಟ್ಟಿದ್ದಳು; ಅವನು ನೀಡಿದ್ದ ಬಂಗಾರದ ಬಳೆಗಳನ್ನೇ ಕೈಗಳಲ್ಲಿ ತೊಟ್ಟಿದ್ದಳು. ಅವನಿತ್ತ ಮುತ್ತಿನ ಮಾಲೆ ಅವಳ ಎದೆಯ ಮೇಲೆ ಲಾಸ್ಯವಾಡುತಿದ್ದಿತು. ಅವಳು ಬೆಳ್ಳಿಯ ಗಿಂಡಿಯನ್ನು ಸಂಗಣ್ಣನ ಕೈಗಿತ್ತಳು; ಮೊದಲು ಸಂಗಣ್ಣನ ತೃಷೆಯಡಗಿತು; ಅನಂತರ ಅವನು ಪಾನಕವನ್ನು ಹೀರಿದ. ಏಕೆಂದರೆ ಮಂಜಕ್ಕನ ಕಣ್ಣುಗಳ ಹೊಳಪು ಮೊದಲೇ ಅವನ ನೀರಡಿಕೆಯನ್ನು ತಣಿಸಿತ್ತು.

"ಬರಿಯ ಪಾನಕದಿಂದ ಅವ್ನ ತೃಪ್ತಿಪಡಿಸಲು ಹೊರಟಿದ್ದೀಯಾ?" ನೆರೆಮನೆಯ ಕರಿಯಣ್ಣ ಕೇಳಿದ: "ಆತ ದೂರದಿಂದ ನಡೆದು ಬಂದಿದ್ದಾನೆ. ಒಳಗೆ ಕರೆದುಕೊಂಡು ಹೋಗಿ ಕಡುಬು ಕೊಡು."

"ಒಳಗೆ ಬಾ." ಎಂದು ಮುಂಜಕ್ಕ ಸಂಗಣ್ಣನನ್ನು ಕರೆದಳು.

"ನನಗೆ ಹಸಿವೆಯೇನೂ ಇಲ್ಲ. ಮೊದಲು ಒಂದಿಷ್ಟು ಮಿಂದು ಮೈ ಕೈಗಳಿಗೆ ಅಂಟಿದ ಧೂಳನ್ನು ಹೊಡೆದೋಡಿಸುವೆನು."

ಎಂದು ಹೇಳಿ ಸಂಗಣ್ಣ ತನ್ನ ಗಂಟು ತೆಗೆದುಕೊಂಡು ತಾನು ಆ ಮನೆಗೆ ಅನ್ಯವಲ್ಲವೆಂಬಂತೆ ನೀರುಮನೆಗೆ ತೆರಳಿದ.

ಸ್ವಲ್ಪ ಸಮಯದಲ್ಲಿ ಇಬ್ಬರು ಮುದುಕರು ಆ ಮನೆಗೆ ಬಂದರು. ಊರವರಿಗೆ ಅವರ ಪರಿಚಯವಿರಲಿಲ್ಲ. ಅವರು ಕೋಲೂರಿಕೊಂಡು ಅಂಗಣದಲ್ಲಿ ಹಜ್ಜೆ ಹಾಕಿದರು. ಅವರನ್ನು ಕಂಡ ಲಿಂಗಯ್ಯ, "ನೀವು ಯಾರು ಅಣ್ಣಂದಿರೇ?" ಎಂದು ಕೇಳಿದ.

"ನಾವು ದೂರದ ಗಂಗವಳ್ಳಿಯಿಂದ ಬಂದೆವು." ಮುದುಕರಲ್ಲಿ ಹಿರಿಯ ನುಡಿದ: "ದೂರದ ಪೊಳಲಿಗೆ ಯಾತ್ರೆ ಹೊರಟಿದ್ದೇವೆ. ನಡುಹೊತ್ತಿನಲ್ಲಿ ಆಸರೆ ಸಿಕ್ಕೀತೆಂದು ಇಲ್ಲಿಗೆ ನುಗ್ಗಿದೆವು. ಇತರ ಮನೆಗಳ ಕದಗಳು ಮುಚ್ಚಿವೆ. ಮುದುಕರಿಗೆ ಒಂದಿಷ್ಟು ಉಣಬಡಿಸಿದರೆ ಪುಣ್ಯ ಬರುವುದು."

"ಬನ್ನಿ ಅಜ್ಜ, ಕುಳ್ಳಿರಿ." ಎಂದು ಹೇಳಿ ಲಿಂಗಯ್ಯ ಮನೆಯೊಳಗಿಂದ ಒಂದು ಹಸೆಯನ್ನು ತಂದು ಜಗಲಿಯ ಮೇಲೆ ಹಾಸಿದ. "ನಡುಹೊತ್ತು ಮಾತ್ರವಲ್ಲ; ಇಂದು ಇರುಳೂ ಇಲ್ಲಿ ಉಂಡು ಉಳಿದು ನಾಳೆ ನಸುಕಿನಲ್ಲಿ ನೀವು ಪಯಣ ಮುಂದುವರಿಸಬಹುದು." ಎಂದು ಉಪಚರಿಸಿದ.

"ಆಗಲಪ್ಪಾ. ದೇವರು ನಿನಗೆ ಒಳ್ಳೆಯದು ಮಾಡಲಿ." ಎಂದ ಕಿರಿಯ ಮುದುಕ. ಅನಿತರಲ್ಲಿ ಮುಂಜಕ್ಕ ಎರಡು ಗಿಂಡಿ ತುಂಬಾ ಪಾನಕ ತಂದು ಮುದುಕರ ಮುಂದಿರಿಸಿದಳು. ಅವರಿಬ್ಬರೂ ಎವೆ ಮಿಟುಕಿಸದೆ ಆಕೆಯನ್ನೇ ದಿಟ್ಟಿಸಿ ನೋಡಿದರು. ಪಾನಕದ ಗಿಂಡಿಯನ್ನು ತುಟಿಯ ಮೇಲಿರಿಸುತ್ತಾ, "ಈಕೆ ನಿನ್ನ ಮಗಳೇ?" ಎಂದು ಹಿರಿಯ ಮುದುಕ ಪ್ರಶ್ನಿಸಿದ.

"ಹೌದು. ಒಬ್ಬಳೇ ಮಗಳು. ಆದುದರಿಂದ ಅಕ್ಕರೆಯಿಂದ ಬೆಳೆಸಿದ್ದೇನೆ." ಎಂಬ ಮಾರ್ನುಡಿ ಲಿಂಗಯ್ಯನ ಕೊರಳಿಂದ ಹೊರಟಿತು.

ಬರಿದಾದ ಗಿಂಡಿಗಳನ್ನು ತೆಗೆದುಕೊಂಡು ಮುಂಜಕ್ಕ ಮನೆಯೊಳಗೆ ತೆರಳಿದಳು. ಹಿರಿಯ ಮುದುಕ ತನ್ನ ಸಂಗಡಿಗನಿಗೆ ಪಿಸು ದನಿಯಲ್ಲಿ "ಅವಳ ರೂಪು ಎಷ್ಟು ಚೆಲುವಾಗಿದೆ! ಅರಸು ಕುಲದ ಹೆಣ್ಣುಗಳಲ್ಲಿಯೂ ಈ ರೂಪ ಗೋಚರಿಸದು." ಎಂದು ನುಡಿದ.

"ನೋಡಿ, ಅವಳ ಮೋರೆಯೆಷ್ಟು ಗಂಭೀರ!" ಎಂದ ಇನ್ನೊಬ್ಬ ಮುದುಕ: "ಅವಳ ಮೊಗ ನೋಡಿ; ಎಷ್ಟು ಲಕ್ಷಣವಾಗಿದೆ! ಒಕ್ಕಲು ಕುಲದ ಹೆಣ್ಣಿನಂತೆ ತೋರುವ ಹಾಗೆ ಇಲ್ಲ."

"ಅಜ್ಜಂದಿರಾ, ಕೈಕಾಲು ಮೋರೆಗಳನ್ನು ತೊಳೆಯಿರಿ." ಎಂದು ಹೇಳುತ್ತಾ ಲಿಂಗಯ್ಯ ಎರಡು ತಂಬಿಗೆ ತುಂಬಾ ನೀರು ತಂದು ಮುದುಕರ ಮುಂದಿರಿಸಿದ.

ಮುದುಕರು ಕೈಕಾಲು ಮೋರೆಗಳನ್ನು ತೊಳೆದುಕೊಂಡರು. ಈ ವೇಳೆಯಲ್ಲಿ ಸಂಗಣ್ಣ ಸ್ನಾನ ಮುಗಿಸಿಕೊಂಡು ಬಂದಿದ್ದ. ಅವನಿಗೆ ಅಪರಿಚಿತ ಮುದುಕರೀರ್ವರನ್ನು ಕಂಡು ಸೋಜಿಗವಾಯಿತು. ಅವರಿಬ್ಬರು ಯಾರೆಂಬುದು ಅವನಿಗೆ ಅರಿವಾಗದಿದ್ದರೂ, ಅವರ ಧ್ವನಿ ಪರಿಚಯವಿರುವ ಹಾಗೆ ಕಂಡಿತು.

ಅತಿಥಿಗಳು ಊಟಕ್ಕೆ ಕುಳಿತರು. ಸಂಗಣ್ಣ ಲಿಂಗಯ್ಯನೊಡನೆ ಬಡಿಸಲು ನಿಂತ. ಸವಿಯಾದ ಮೃಷ್ಟಾನ್ನವನ್ನು ಉಂಡು ಎಲ್ಲರೂ ಸಂತೃಪ್ತಿಯನ್ನು ತಳೆದರು. ಊಟವಾದ ಮೇಲೆ ಎಲ್ಲರು ಜಗಲಿಯ ಮೇಲೆ ಕುಳಿತು ತಾಂಬೂಲವನ್ನು ಮೆಲ್ಲತೊಡಗಿದರು. ಕೆಲವರು ಹರಟೆಹೊಡೆಯುವುದರಲ್ಲಿ ಮಗ್ನರಾದರು. ಇನ್ನು ಕೆಲವರು ಪಗಡೆಯಾಡತೊಡಗಿದರು. ಮೂಲೆಯಲ್ಲಿ ಕುಳಿತಿದ್ದ ಕಿರಿಯ ಮುದುಕ ಸಂಗಣ್ಣನ ಕಡೆ ಬೆರಳುತೋರಿಸಿ, "ಆತ ಯಾರು?" ಎಂದು ಲಿಂಗಯ್ಯನನ್ನು ಪ್ರಶ್ನಿಸಿದ.

"ಆತ ಮೂಡಲಿನವನು. ಮಾದರ ಹಳ್ಳಿಯ ಅನುಕೂಲವಂತನಾದ ಒಬ್ಬ ರೈತ."

"ಮೊದಲಿನಿಂದಲೂ ನಿನಗೆ ಆತನ ಪರಿಚಯವಿದೆಯೇ?"

"ಇಲ್ಲ, ನಾಲ್ಕು ತಿಂಗಳ ಹಿಂದೆ ಆತನ ಪರಿಚಯವಾಯಿತು." ಲಿಂಗಯ್ಯ ಮಾರ್ನುಡಿದ: "ಉಡುಪಿಗೆ ಪಯಣ ಕೈಗೊಂಡಿದ್ದಾಗ ಆತ ಒಂದಿರುಳು ಇಲ್ಲಿ ತಂಗಿದ್ದ. ಆಗ ಅವನ ಪರಿಚಯವಾಯಿತು. ಈಗ ಆಗಾಗ ನನ್ನಲ್ಲಿಗೆ ಬರುತ್ತಿದ್ದಾನೆ."

"ನಿನ್ನ ಮನೆಯವರ ಪೈಕಿ ಒಬ್ಬನಂತೆ ಬಹು ಸಲುಗೆಯಿಂದ ಇರುವನಲ್ಲ!"

"ಅವನ ಗುಣಗಳನ್ನು ನನ್ನ ಮಗಳು ಮೆಚ್ಚಿದ್ದಾಳೆ." ಲಿಂಗಯ್ಯ ಉತ್ತರಿಸಿದ.

"ಈ ದಿನವನ್ನು ಸ್ವಲ್ಪ ಉಲ್ಲಾಸದಲ್ಲಿ ಕಳೆಯೋಣ." ಅತಿಥಿಗಳಲ್ಲಿ ಒಬ್ಬನಾದ ಸೋಮಣ್ಣ ನುಡಿದ: "ಹಾಡು ಗೊತ್ತಿರುವ ಹೆಣ್ಣುಗಳೆಲ್ಲ ಒಂದೊಂದು ಹಾಡು ಹಾಡಲಿ."

"ಹೌದು ಎಲ್ಲರೂ ಒಂದೊಂದು ಪದ ಹೇಳಬೇಕು." ಕರಿಯಣ್ಣ ಸೋಮಣ್ಣನಿಗೆ ಬೆಂಬಲನಾದ.

ಹಳ್ಳಿಯ ಹುಡುಗಿಯರಿಗೆ ಅಂತಹುದೇ ಒಂದು ಸಂದರ್ಭ ಬೇಕಾಗಿತ್ತು. ತಾವು ಕಲಿತ ಪದಗಳನ್ನು ಹಾಡಿ ತೋರಿಸುವುದು ಯಾವಾಗ,—ತಮ್ಮ ಪದಗಳನ್ನು ಜನ ಮೆಚ್ಚುವುದು ಯಾವಾಗ. ಎಂದು ಅವರು ಸಂದರ್ಭ ಕಾಯುತಿದ್ದರು. ಆದುದರಿಂದ ಅವರು ಹೆಚ್ಚು ಹೇಳಿಸಿಕೊಳ್ಳದೆ ಹಾಡ ತೊಡಗಿದರು. ಸಂಗಣ್ಣ ತನ್ನ ಗಂಟಿನಿಂದ ಕೊಳಲನ್ನು ತೆಗೆದು, ಹುಡುಗಿ ಯರು ಹೇಳುತಿದ್ದ ಪದಗಳನ್ನು ತನ್ನ ಕೊಳಲಲ್ಲಿ ನುಡಿಸತೊಡಗಿದ. ಬೇರೊಬ್ಬ ತರುಣ ತಾಳಹಾಕತೊಡಗಿದ.

ಹಾಡು ಇಂಪಾಗಿದ್ದಾಗ ಜನ ಮೆಚ್ಚಿ ತಲೆದೂಗುತಿದ್ದರು. ಹಾಡು ಅಪಸ್ವರದ ಹಾದಿಯನ್ನು ಹಿಡಿದಾಗ ಅವರು ನಗುತಿದ್ದರು. ಹಾಡು ಬಹು ಮಧುರವಾಗಿದ್ದರೆ "ಭಲಾ!" ಎಂಬ ಪ್ರಶಂಸೋದ್ಗಾರಗಳು ಅವರ ಕೊರಳು ಗಳಿಂದ ಹೊಮ್ಮುತಿದ್ದುವು.

ಕೊನೆಗೆ ಮಂಜಕ್ಕನ ಸರದಿ ಬಂತು. ಅವಳು ಹಸೆಯ ಮೇಲೆ ಕುಳಿತು ಎಡಗೈಯನ್ನು ನೆಲದಮೇಲಿರಿಸಿ ಹಾಡತೊಡಗಿದಳು. ಅವಳ ಸ್ವರ ಕೋಗಿಲೆಯ ಇಂಚರದಂತೆ ಮಧುರವಾದುದು. ತುಟಿಗಳನ್ನೊಡೆದುಕೊಂಡು ಗಾನಲಹರಿ ಪಸರಿಸತೊಡಗಿತು. ಅವಳು ಆರಿಸಿಕೊಂಡ ಹಾಡು ಬಹು ಸೂಕ್ಷ್ಮ ಭಾವಗಳನ್ನು ಒಳಗೊಂಡುದು. ಆ ಗೀತೆ ಕೇಳುಗರನ್ನು ಮಂತ್ರ ಮುಗ್ಧರನ್ನಾಗಿ ಮಾಡಿತು. ಅವರು ಮಾತು ನಿಲ್ಲಿಸಿ ಹಾಡು ಕೇಳತೊಡಗಿ ದರು. ಆ ಗೀತೆ ಅವರನ್ನು ಬೇರೊಂದು ಲೋಕಕ್ಕೆ ಒಯ್ದಿತು.

ಮೂಲೆಯಲ್ಲಿ ಮಂಡಿಸಿದ್ದ ಮುದುಕರನ್ನು ಸಹ ಹಾಡು ಆಕರ್ಷಿಸಿತು. ಅವರು ಅದನ್ನು ಕಿವಿಗೊಟ್ಟು ಕೇಳಿದರು. ಹಿರಿಯ ಮುದುಕನು "ಈ ಸ್ವರವನ್ನು ನಾನೆಲ್ಲಿಯೋ ಕೇಳಿದಂತೆ ನೆನಪಾಗುವುದು." ಎಂದು ಜತೆಗಾರ ನಿಗೆ ಹೇಳಿದ.

"ಹೌದು, ಇಂತಹುದೇ ಧ್ವನಿಯನ್ನು ಕೇಳಿ ನಾನು ಎಲ್ಲಿಯೋ ಆನಂದಿ ಸಿದ್ದೇನೆ." ಎಂದು ನುಡಿದ ಕಿರಿಯ ಮುದುಕ.

ಮಂಜಕ್ಕ ಹಾಡನ್ನು ಹಾಡಿ ಮುಗಿಸಿದಳು. ಕರಿಯಣ್ಣ, "ಮಂಜಕ್ಕ ಬಹು ಚೆನ್ನಾಗಿ ಹಾಡಿಯವ್ಳೆ. ಅವ್ಳು ಉಳಿದವ್ರನ್ನೆಲ್ಲಾ ಸೋಲಿಸಿದ್ದಾಳೆ. ಅವಳಿಗೆ ಏನಾದ್ರೂ ಒಂದು ಮೆಚ್ಚು ಕೊಡ್ಬೇಕು." ಎಂದು ಮೆಚ್ಚಿಕೆಯ ದನಿಯಲ್ಲಿ ಹೇಳಿದ.

"ಆ ಚಿಂತೆ ನಿಮಗೇಕಜ್ಜ?" ಎಂದು ನುಡಿಯುತ್ತಾ ಸಂಗಣ್ಣ ಭಾಂಡದೊಳಗೆ ಕೈಹಾಕಿದ.

"ಏನು ನೀನು ಮೆಚ್ಚು ಕೊಡುವೆಯಾ?" ಕಿರಿಯ ಮುದುಕ ವಿಸ್ಮಯದಿಂದ ಪ್ರಶ್ನಿಸಿದ.

"ಏನು ಕೊಡ್ಬಾರ್ದೇ ಮಾವ?" ಎಂದು ಸಂಗಣ್ಣ ಲಿಂಗಯ್ಯನ ಮೋರೆಯನ್ನು ನೋಡಿದ.

"ಕೊಡು ಸಂಗಣ್ಣ, ನನ್ನ ಆಕ್ಷೇಪವಿಲ್ಲ." ಎಂದು ಹುಡುಗಿಯ ತಂದೆ ಅನುಮತಿಸಿದ.

ಸಂಗಣ್ಣ ಭಾಂಡದಿಂದ ಅಂದವಾದ ಬಂಗಾರದ ಗುಲಾಬಿ ಹೂವನ್ನು ತೆಗೆದು ಅಷ್ಟು ಜನರ ಮುಂದೆ ಮಂಜಕ್ಕನ ತುರುಬಿಗೆ ಸಿಕ್ಕಿಸಿದ. ಸಂಗಣ್ಣನ ದಿಟ್ಟತನವನ್ನು ಕಂಡು ಜನವೆಲ್ಲ ಗೊಳ್ಳೆಂದು ನಕ್ಕರು. ನಾಚಿಕೆಯಿಂದ ಮಂಜಕ್ಕನ ಮೊಗವೂ ಗುಲಾಬಿಯ ಬಣ್ಣವನ್ನು ತಳೆಯಿತು.

"ಎಲಾ ಹುಡುಗ! ಮಡದಿಯ ತುರುಬಿಗೆ ಹೂಸೆಕ್ಕಿಸುವಂತೆ ಈ ಹೆಣ್ಣಿನ ಜಡೆಗೆ ಬಂಗಾರದ ಹೂ ಮುಡಿಸಿದೆಯಲ್ಲ!" ಕಿರಿಯ ಮುದುಕ ಮುನಿಸು ಬೆರೆತ ದನಿಯಲ್ಲಿ ಉದ್ಗಾರವೆತ್ತಿದ. ನುಡಿಯಲ್ಲಿ ಹುದುಗಿದ್ದ ಮುನಿಸನ್ನು ಜನ ತಿಳಿಯಲಿಲ್ಲ.

"ಏಕೆ ಮುಡಿಸಬಾರದು? ನಾಳೆ ದಿನ ಈಕೆಯೇ ನನ್ನ ಮಡದಿಯಾಗುವಳು."

"ಈ ಹೆಣ್ಣನ್ನು ನೀನು ಮದುವೆಯಾಗುವೆಯಾ?"

"ಅವಳೂ ಒಪ್ಪಿದ್ದಾಳೆ; ನಾನೂ ಒಪ್ಪಿದ್ದೇನೆ; ಮಾವನೂ ಒಪ್ಪಿದ್ದಾನೆ. ಬೇರೆ ಯಾವ ಅಡಚಣೆಯಿದೆ?"

"ನಿನ್ನ ತಂದೆ ಒಪ್ಪಬೇಕಲ್ಲ!" ಎಂದ ಕಿರಿಯ ಮುದುಕ.

"ಸಂಗಣ್ಣನಿಗೆ ತಂದೆ ಇಲ್ಲವಲ್ಲ!" ಎಂದು ಲಿಂಗಯ್ಯ ಹೇಳಿದ.

"ಆತನಿಗೆ ತಂದೆಯೂ ಇದ್ದಾನೆ. ಆ ತಂದೆಯನ್ನು ಈಗ ನೀವೆಲ್ಲ ಕಾಣುವಿರಂತೆ!"

ಎಂದು ದುಗುಡದಿಂದ ನುಡಿದ ಮುದುಕ ತಾನು ಕಟ್ಟಿಕೊಂಡ ಗಡ್ಡ ವನ್ನು ಕಿತ್ತೆಸೆದ. ಹೊದೆದಿದ್ದ ಹಚ್ಚಡವನ್ನು ಕಳಚಿದ. ಈಗ ಅಲ್ಲಿದ್ದವರು ಮುದುಕನನ್ನಲ್ಲ ನೋಡುತ್ತಿದ್ದುದು; ಅವರು ಗಂಗವಳ್ಳಿಯ ಪ್ರಭುವಾದ ಹನುಮಣ್ಣನನ್ನು ನೋಡುತಿದ್ದರು. ಅವನ ಕಣ್ಣುಗಳು ಕೆಂಡಗಳನ್ನು ಕಾರು ತಿದ್ದುವು; ಮೊಗ ಕೆಂಪಡರಿತ್ತು. ತುಟಿಗಳು ಅದುರುತಿದ್ದುವು. ಅವನು ಎದ್ದು ನಿಂತು, "ಈಗ ನಾನು ಯಾರೆಂಬುದನ್ನು ಗುರುತಿಸಿರಿ!" ಎಂದು ಒದರಿದ.

ಜನರು ತಮ್ಮ ಅರಸನನ್ನು ಗುರುತಿಸಿದರು. ದೊರೆಯ ಆಗ್ರಹಕ್ಕೆ ತಾವು ತುತ್ತಾಗುವೆವು ಎಂಬ ಅಂಜಿಕೆ ಅವರನ್ನು ಬಾಧಿಸಿತು. ಅವರು ಅಲ್ಲಿಂದ ಚದರ ತೊಡಗಿದರು. ಲಿಂಗಯ್ಯನ ಕಾಲುಗಳು ನಡುಗತೊಡ ಗಿದುವು. ಸಂಗಣ್ಣನ ಮೋರೆ ಬಿಳುಪೇರಿತು. ಅವನ ತುಟಿಗಳಿಂದ ಮಾತು ಹೊರಡಲಿಲ್ಲ. ಕೊನೆಗೆ ಅಲ್ಲಿ ಅರಸನೂ, ಅವನ ಒಡನಾಡಿಯೂ ಮನೆಯ ವರೂ ಉಳಿದರು.

"ಈ ಸಂಗಣ್ಣ ಮಾದರಹಳ್ಳಿಯ ತಂದೆಯಿಲ್ಲದ ಬೇಸಾಯಗಾರನಲ್ಲ." ಹನುಮಣ್ಣ ಕ್ರೋಧ ಬೆರೆತ ಸ್ವರದಲ್ಲಿ ಹೇಳಿದ. "ಈತ ನಾಳೆ ನಿಮ್ಮನ್ನಾಳುವ ಪ್ರಭು!"

"ಪ್ರಭುಗಳು ಈ ಬಡವನ ಅಪರಾಧಗಳನ್ನು ಮನ್ನಿಸಬೇಕು! ಎಂದು ಲಿಂಗಯ್ಯ ದೊರೆಯ ಪಾದಗಳಿಗೆ ನಮಸ್ಕರಿಸಿದ.

"ಅಪ್ಪಾ, ನಾನು ತಿಳಿಯದೆ ಮಾಡಿದ ತಪ್ಪನ್ನು ಮನ್ನಿಸು." ಎಂದು ಈಚಣ್ಣ ತಂದೆಯ ಅಡಿಗಳಿಗೆ ಎರಗಿದ.

"ಅವಿವೇಕಿ! ನಿನ್ನ ಕುಲದ ಹಿರಿಮೆಯನ್ನೂ, ನಾಡನ್ನಾಳುವ ನನ್ನ ಘನ ತೆಯನ್ನೂ ಕಳೆದೆಯಲ್ಲ!" ತಪ್ತ ಸ್ವರ ದೊರೆಯ ಕೊರಳಿಂದ ಹೊರಟಿತು. "ಈ ಹೊಲಸು ಗೈಮೆಗೆ ಏನು ಹೇಳಬೇಕೋ ನನಗೆ ತಿಳಿಯದು."

"ನಾನು ಯಾವ ಹೇಯ ಕಾರ್ಯಕ್ಕೂ ಕೈಹಾಕಿಲ್ಲ." ಈಚಣ್ಣ ವಿನೀತ ಸ್ವರದಲ್ಲಿ ಮಾರ್ನುಡಿದ. "ಮಂಜುವಿನಲ್ಲಿರುವ ಉತ್ತಮ ಗುಣಗಳು ಅರಸು ಕುಲದ ಸ್ತ್ರೀಯರಲ್ಲಿಯೂ ಗೋಚರಿಸವು. ಅವಳ ಶ್ರೇಷ್ಠ ಗುಣಗಳಿಗೆ ನಾನು ಒಲಿದಿದ್ದೇನೆ; ಈಕೆಯನ್ನು ನಾನು ಬಾಳುವೆಯ ಜತೆಗಾತಿಯಾಗಿ ಸ್ವೀಕರಿಸಬೇಕೆಂದಿರುವೆನು. ತಾವು ನನ್ನನ್ನು ಅನುಗ್ರಹಿಸಬೇಕು."

"ಗದ್ದೆಯುಳುವವನ ಮಗಳು ಎಂದಿಗೂ ನಾಡರಾಣಿಯಾಗಳು.

ಅವಳು ಮುಂಕುಬೂದಿಯನ್ನು ಚೆಲ್ಲಿ ನಿನ್ನನ್ನು ವಶಪಡಿಸಿಕೊಂಡಿದ್ದಾಳೆ." ಅರಸನು ಹೇಳಿದ: "ನೀನು ನಿನ್ನ ಹಟವನ್ನೇ ಹಿಡಿದರೆ,–ನೀನು ಗಂಗವಳ್ಳಿಯ ಸಿಂಹಾಸನಕ್ಕೆ ಹಕ್ಕುದಾರನಲ್ಲವೆಂದು ಸಾರುವೆನು!"

ಮುಂಕುಬೂದಿಯನ್ನು ಚೆಲ್ಲಿದಳು ಎಂಬ ನುಡಿ ಮುಂಜಕ್ಕನ ಹೃದಯವನ್ನು ಚುಚ್ಚಿತು. ಅವಳು ದೊರೆಗೆ ತಲೆವಾಗಿ, "ಪ್ರಭೂ, ನಾನಲ್ಲ ಮುಂಕುಬೂದಿಯನ್ನು ಚೆಲ್ಲಿದುದು; ಪ್ರತಿಯಾಗಿ ರಾಜಕುಮಾರರೇ, ತಾನು ಸಂಗಣ್ಣನೆಂದು ಹೇಳಿ ನನ್ನ ಕಣ್ಣುಗಳಿಗೆ ಮುಂಕುಬೂದಿಯನ್ನು ಚೆಲ್ಲಿದರು; ತಾನೊಬ್ಬ ರೈತನ ಮಗನೆಂದು ಹೇಳಿ ನನ್ನನ್ನು ಅಪ್ಪನನ್ನು ಮೋಸಗೊಳಿಸಿದರು. ಅವರು ದೊರೆ ಮಗನೆಂದು ಅರಿತಿದ್ದರೆ, ಅವರ ಸನಿಹದಲ್ಲಿ ಸುಳಿಯುವ ಸಾಹಸವನ್ನು ಮಾಡುತ್ತಿರಲಿಲ್ಲ" ಎಂದು ನುಡಿದಳು.

ಮುಂಜಕ್ಕನ ನುಡಿಗೆ ಪ್ರತಿಸರಳನ್ನು ಹೂಡಲು ದೊರೆಯ ಬತ್ತಳಿಕೆಯಲ್ಲಿ ಅಂಬುಗಳಿರಲಿಲ್ಲ. ತನ್ನ ಮಗ ಈಚಣ್ಣನೇ ತಾನೊಬ್ಬ ಬೇಸಾಯಗಾರನ ಮಗನೆಂದು ಹೇಳಿ ಲಿಂಗಯ್ಯನ ಮನೆಯಲ್ಲಿ ಪ್ರವೇಶ ಹೊಂದಿದ್ದನೆಂಬುದನ್ನು ಅವನು ಬಲ್ಲ. ಅವನು "ಈಚಣ್ಣಾ, ನೀನು ಈ ರೈತನ ಮಗಳನ್ನೇ ಮದುವೆಯಾಗುವೆನೆಂದು ಹಟಹಿಡಿದರೆ, ನೀನು ಸಿಂಹಾಸನದ ಆಸೆಯನ್ನು ತೊರೆಯಬೇಕಾಗುವುದು." ಎಂದು ಗದರಿಸಿದ.

"ಅಪ್ಪಾ, ನಾನು ಮುಂಜುವನ್ನು ಮನವಾರೆ ಪ್ರೀತಿಸುತ್ತಿದ್ದೇನೆ. ಆಕೆ ನನಗೆ ಸಿಂಹಾಸನಕ್ಕಿಂತಲೂ ಮಿಗಿಲಾದವಳು. ನೀವು ಅವಳ ಕೈಹಿಡಿದು ಬಾಳಲು ಅನುಮತಿಸುವಿರಾದರೆ, ನಾನೊಬ್ಬ ಸಾಮಾನ್ಯ ಬೇಸಾಯಗಾರನಾಗಿ ಬಾಳುವೆನು."

"ಮರುಳ, ಅವಿವೇಕಿ!" ತಂದೆಯ ತುಟಿಗಳಿಂದ ಕ್ರೋಧವಚನ ಬಿರಿದು ಬಂದಿತು: "ನಿನ್ನ ಬುದ್ಧಿಯೇನಾಯಿತು?"

ಅರಸನು ತನ್ನ ಕೋಪದೃಷ್ಟಿಯನ್ನು ಲಿಂಗಯ್ಯನ ಕಡೆಗೆ ಹೊರಳಿಸಿದ. "ನೀನೂ ನಿನ್ನ ಮಗಳೂ ಸೇರಿ ರಾಜಕುಮಾರನ ಮನಸ್ಸನ್ನು ಕೆಡಿಸಿದ್ದೀರಿ. ಆತನನ್ನು ಆತನ ಪಾಡಿಗೆ ಬಿಡದಿದ್ದರೆ, ನಿಮ್ಮನ್ನು ರಾಜದ್ರೋಹಿಗಳೆಂದು ಸೆರೆಮನೆಯಲ್ಲಿ ಇರಿಸುವೆನು." ಎಂದು ಅವನು ಲಿಂಗಯ್ಯನನ್ನು ಬೆದರಿಸಿದ.

"ಒಡೆಯರೇ,—ನೀವು ಕೋಪಗೊಳ್ಳಬಾರದು." ಈ ವರೆಗೆ ತುಟಿ ತೆರೆಯದಿದ್ದ ವೀರಣ್ಣ ಈಗ ನಡುವೆ ಬಾಯಿಹಾಕಿದ: "ನೀವು ಕೋಪಗೊಳ್ಳು

ವುದರಿಂದ ರಾಜಕುಮಾರರ ಹಟ ಹೆಚ್ಚುವುದು. ಉಪಾಯವಾಗಿ ತಾಳ್ಮೆಯಿಂದ ಅವರಿಗೆ ಬುದ್ಧಿ ಹೇಳಬೇಕು. ನೀವು ಅನುಮತಿಸುವಿರಾದರೆ, ನಾನು ಆ ಕೆಲಸವನ್ನು ಮಾಡುವೆನು. ಅವರು ನನ್ನಲ್ಲಿ ಮನಬಿಚ್ಚಿ ಮಾತಾಡುವಂತೆ ನಿಮ್ಮೊಡನೆ ಮಾತಾಡಲಾರರು. ಆದುದರಿಂದ ನೀವು ಮುಂದೆ ಸಾಗಿರಿ. ನಾನು ಈಚಣ್ಣನನ್ನು ಸಮಾಧಾನಪಡಿಸಿ ರಾಜಧಾನಿಗೆ ಕರೆದುಕೊಂಡು ಬರುವೆನು."

ವೀರಣ್ಣನ ಮಾತು ಅರಸನಿಗೆ ಸೂಕ್ತವಾಗಿ ತೋರಿತು. ತಾನು ದುಡುಕಿ ಮಾತಾಡುವುದರಿಂದ ಕೆಲಸ ಕೆಡುವ ಸಂಭವೇ ಹೆಚ್ಚೆಂದು ಅವನು ಮನಗಂಡ. ಆದುದರಿಂದ ಅವನು, "ಆಗಲಿ ವೀರಣ್ಣ. ನಿಮ್ಮ ಮಾತಿನಲ್ಲಿ ನಂಬಿಕೆಯಿಟ್ಟು ಮುಂತೆರಳುವೆನು. ನೀವು ರಾಜಕುಮಾರನಿಗೆ ಬುದ್ಧಿ ಹೇಳಿ ಅರಮನೆಗೆ ಕರೆದುಕೊಂಡು ಬನ್ನಿ" ಎಂದು ನುಡಿದು ಮನೆಯಿಂದ ಇಳಿದ; ಹೊರಗೆ ಮಾರ್ಗದಲ್ಲಿ ನಿಂತಿದ್ದ ಕುದುರೆಯನ್ನೇರಿ ರಾಜಧಾನಿಗೆ ತೆರಳಿದ.

"ಈಚಣ್ಣ, ಬಾ. ನೀನು ನನಗೆ ಅನ್ಯನಲ್ಲ. ಈ ಅಜ್ಜನೊಡನೆ ಮನ ಬಿಚ್ಚಿ ಮಾತಾಡು. ನಾನು ನಿನಗೆ ಕೇಡನ್ನು ಬಯಸಲಾರೆ, ನಿನ್ನ ಸುಖಕ್ಕೆ ಕಲ್ಲು ಹಾಕಲಾರೆ." ಎಂದು ವೀರಣ್ಣ ಆತ್ಮೀಯತೆಯಿಂದ ರಾಜಕುಮಾರನನ್ನು ಮಾತಾಡಿಸಿದ.

ವೀರಣ್ಣನ ನುಡಿಗಳಲ್ಲಿ ತುಂಬಿದ್ದ ಆತ್ಮೀಯತೆ, ಮಮತೆಗಳು ರಾಜಕುಮಾರನ ಹೃದಯವನ್ನು ಸ್ಪರ್ಶಿಸಿದುವು. ಅವನು ಬಂದು ವೀರಣ್ಣನ ಸಮೀಪದಲ್ಲಿ ಕುಳಿತು, "ಅಜ್ಜ ನನ್ನ ಪ್ರೀತಿಯ ಆಳವನ್ನು ನೀನು ತಿಳಿಯಲಾರೆ. ಮಂಜುವಿಲ್ಲದಿದ್ದರೆ ನನ್ನ ಜೀವನ ಮಸಣದ ಬಾಳಾಗುವುದು." ಎಂದು ಗದ್ಗದ ಸ್ವರದಲ್ಲಿ ಹೇಳಿದ. ಅವನ ಕಣ್ಣುಗಳಲ್ಲಿ ನೀರು ತುಂಬಿತ್ತು.

"ಈಚಣ್ಣ, ನಿನ್ನ ಒಲವಿಗೆ ನಾನು ವಿಘ್ನ ತರಲಾರೆ. ಆದರೂ ನೀನು ತುಂಬಾ ಆಲೋಚಿಸಬೇಕಾಗಿದೆ. ಇಲ್ಲದಿದ್ದರೆ ನಿನ್ನ ಜೀವಮಾನ ದುಃಖದ ಹಂದರವಾದೀತು?"

"ಅಜ್ಜ, ನಾನು ಬಹಳ ಆಲೋಚಿಸಿದ್ದೇನೆ. ನೀವು ಮಂಜುವಿನ ಗುಣಗಳನ್ನು ಅರಿಯಲಾರಿರಿ." ಈಚಣ್ಣ ಉಸುರಿದ. "ನಾನು ಅವಳ ರೂಪವನ್ನು ನೋಡಿ ಒಲಿದುದಲ್ಲ. ಅವಳ ಗುಣಸಂಪತ್ತಿಗೆ ಮಾರುಹೋದೆ. ಅರಮನೆಯ ಅರಸು ಕುಮಾರಿಯಲ್ಲಿಯೂ ಆ ಸಂಪದ ತೋರದು."

"ಆಕೆಯನ್ನು ನೀನು ಮದುವೆಯಾದರೆ ದೊರೆಗಳು ಕೋಪಗೊಳ್ಳು ವರು. ನೀನು ಮಾತ್ರವಲ್ಲ; ಮಂಜಕ್ಕನೂ ಲಿಂಗಯ್ಯನೂ ಅರಸನ ಆಗ್ರಹಕ್ಕೆ ತುತ್ತಾಗುವರು."

"ನನಗೆ ದೊರೆಯಾಗಿ ಬಾಳಬೇಕೆಂಬ ಆಶೆಯಿಲ್ಲ. ಮಂಜು ನನ್ನ ಮಡದಿಯಾಗುವುದಾದರೆ, ನಾನು ಒಬ್ಬ ರೈತನಾಗಿ ಉಳುಮೆಯನ್ನು ಮಾಡುತ್ತಾ ಸಂತಸದಿಂದ ದಿನಕಳೆಯುವೆನು. ಮಂಜುವಿಗೋಸುಗ ನನ್ನ ಪ್ರಾಣವನ್ನಾದರೂ ಕೊಡುವೆನು."

ಎಂದು ನುಡಿದ ಈಚಣ್ಣನ ವಚನಗಳನ್ನು ವೀರಣ್ಣ ಕಿವಿಗೊಟ್ಟು ಆಲಿಸಿದ. ಆ ನುಡಿಗಳು ಅವನ ಪ್ರೇಮವೆಷ್ಟು ಗಾಢವಾದುದೆಂಬುದನ್ನು ಅರುಹಿದುವು. ಈ ಹಾಲಿಗೆ ಹುಳಿ ಹಿಂಡಿ ಎಳೆಯರ ಜೀವಗಳನ್ನು, ದುಃಖದ ಮಡುವಿನಲ್ಲಿ ಅದ್ದಲು ಅವನ ಮನಸ್ಸು ಇಷ್ಟಪಡಲಿಲ್ಲ. ಅವನು ತುಸು ಆಲೋಚನೆ ಮಾಡಿದ ಅನಂತರ, "ಈಚಣ್ಣ, ನೀನು ಗದ್ದುಗೆಯನ್ನು ತೊರೆದರೂ ಮಂಜಕ್ಕನನ್ನು ತೊರೆಯಲಾರೆಯಲ್ಲವೇ?" ಎಂದು ಪ್ರಶ್ನಿಸಿದ.

"ಹೌದು. ಆಕೆಯನ್ನು ಮಾತ್ರ ನಾನು ಬಿಡಲಾರೆ."

"ನಾನು ಹೇಳಿದಂತೆ ಮಾಡುವೆಯಾ?"

"ಏನದು?"

"ನಾವೆಲ್ಲ ಹೊನ್ನ ಹಳ್ಳಿಗೆ ಹೊರಟು ಹೋಗೋಣ."

"ಹೊನ್ನ ಹಳ್ಳಿಯ ದೊರೆಗೂ, ನಮ್ಮ ತಂದೆಗೂ ವೈಮನಸ್ಯವಂತೆ."

"ಅದು ಬಹು ಹಿಂದಿನ ಕತೆ. ನಾನೂ ಹೊನ್ನ ಹಳ್ಳಿಯವನೇ, ಅಲ್ಲಿಯ ದೊರೆ ನನಗೆ ಸ್ವದೇಶಕ್ಕೆ ಮರಳಿ ಬಾರೆಂದು ಪತ್ರ ಬರೆಯುತ್ತಿರುವರು. ಅವರು ನಮಗೆಲ್ಲ ಆಶ್ರಯಕೊಡುವರು."

"ಅಲ್ಲಿಗೆ ತೆರಳಿ ಮಾಡುವುದೇನು?" ಈಚಣ್ಣ ಉತ್ಸುಕತೆಯಿಂದ ಪ್ರಶ್ನಿಸಿದ.

"ಅಲ್ಲಿ ಹೊನ್ನ ಹಳ್ಳಿಯ ದೊರೆಯ ಸಮ್ಮುಖದಲ್ಲಿ ನಿಮ್ಮೀರ್ವರ ವಿವಾಹ ನಡೆಯಲಿ." ವೀರಣ್ಣ ತನ್ನ ಮತಿಗೆ ಹೊಳೆದ ಉಪಾಯದ ಕಂತೆಯನ್ನು ಬಿಚ್ಚ ತೊಡಗಿದ: "ಕೆಲ ದಿನಗಳಲ್ಲಿಯೇ ದೊರೆಗಳ ಕೋಪ ಆರೀತು. ಅವರು ನಿಮ್ಮನ್ನು ಹಿಂದಕ್ಕೆ ಕರೆಸಿಕೊಂಡಾರು. ಇಲ್ಲಿ ನೀನು ಮಂಜಕ್ಕನನ್ನೇ ಮದುವೆಯಾಗುವೆನೆಂದು ಹಟ ಹಿಡಿದರೆ ಅರಸನ ಆಗ್ರಹಕ್ಕೆ

ಬಲಿಯಾಗಿ ಮಂಜಕ್ಕನೂ, ಲಿಂಗಯ್ಯನೂ ಸೆರೆಮನೆಯನ್ನು ಸೇರ ಬೇಕಾದೀತು!"

ವೀರಣ್ಣನ ಸಲಹೆ ರಾಜಕುಮಾರನಿಗೆ ಸೂಕ್ತವಾಗಿ ಕಂಡಿತು. ಅವನು ಒಪ್ಪಿದ. ಆದರೆ ಲಿಂಗಯ್ಯ ತನ್ನ ಗದ್ದೆ ತೋಟ ತುರುಹಿಂಡುಗಳನ್ನೇನು ಮಾಡುವುದೆಂದು ಚಿಂತಿಸತೊಡಗಿದ. ಅವನು, "ನನ್ನ ಗದ್ದೆ ತೋಟಗಳನ್ನು ಏನು ಮಾಡಲಿ?" ಎಂದು ಪ್ರಶ್ನಿಸಿದ.

"ನೀನು ಗದ್ದೆ ತೋಟಗಳ ಚಿಂತೆಯನ್ನು ಹಚ್ಚಿಕೊಂಡರೆ, ನಿನ್ನ ತಲೆಯನ್ನು ದಂಡ ತೆರಬೇಕಾದೀತು." ಎಂದು ವೀರಣ್ಣ ಅವವನ್ನು ಎಚ್ಚರಿಸಿದ.

"ಮಾವ, ನಿಮ್ಮ ಗದ್ದೆ ತೋಟ ದನಕರುಗಳನ್ನು ಕರಿಯಣ್ಣನಿಗೋ, ಸೋಮಣ್ಣನಿಗೋ ಒಪ್ಪಿಸಿ." ಎಂದು ಈಚಣ್ಣ ಲಿಂಗಯ್ಯನಿಗೆ ಸಲಹೆ ನೀಡಿದ.

"ಹೌದು. ನಿಮ್ಮ ಗದ್ದೆ ತೋಟಗಳನ್ನು ನೆರೆಹೊರೆಯವರು ನೋಡಿಕೊಳ್ಳಲಿ." ಎಂದು ವೀರಣ್ಣನೂ ಹೇಳಿದ. ಲಿಂಗಯ್ಯ ಕರಿಯಣ್ಣನೊಡನೆ ಮಾತಾಡಲು ತೆರಳಿದ.

"ನನ್ನ ಅಪರಾಧವನ್ನು ಮನ್ನಿಸು ಮಂಜು." ಈಚಣ್ಣ ಮಂಜಕ್ಕನ ಕಡೆ ದೃಷ್ಟಿ ಹೊರಳಿಸಿದ: "ನಾನು ದೊರೆಯ ಮಗನೆಂದು ಹೇಳಿದ್ದರೆ, ನಿಮ್ಮ ಮನೆಯಲ್ಲಿ ನನಗೆ ಆಸರೆ ದೊರೆಯುತ್ತಿರಲಿಲ್ಲ. ನೀನು ನನಗೊಲಿದ ಭಾಗ್ಯ ದೇವತೆಯಾಗುತ್ತಿರಲಿಲ್ಲ."

"ನನ್ನನ್ನು ಮೆಚ್ಚಿದುದರಿಂದ ಬಂದ ಭಾಗ್ಯವನ್ನು ಕಂಡಿರಲ್ಲ! ತಂದೆಯ ಕೋಪಕ್ಕೆ ಬಲಿಯಾಗುವ ಅನುಗ್ರಹವನ್ನು ನೀಡಿದೆ; ನಾಡನ್ನು ತೊರೆಯುವ ದೌರ್ಭಾಗ್ಯವನ್ನು ತಂದೆ!"

"ನಿನ್ನೊಡನೆ ನಾಡನ್ನು ತೊರೆಯುವುದೂ ಒಂದು ಮಹಾಭಾಗ್ಯ!"

ಹೊಸ ಅಕ್ಕಿಯೂಟದ ಹಬ್ಬದ ದಿನದ ರಾತ್ರಿಯೇ ಮೂಡಣದಲ್ಲಿ ತಂಗದಿರ ಮೂಡಿದಾಗ, ಆ ನಾಲ್ವರು ಮನೆಯನ್ನು ತೊರೆದರು. ವೀರಣ್ಣನ ಸೂಚನೆಯಂತೆ ಅವರು ಹೊನ್ನಹಳ್ಳಿಗೆ ನೌಕೆಯನ್ನೇರಲು ಹತ್ತಿರದ ಬಾರ್ಕೂರಿನ ಹಾದಿಯನ್ನು ಹಿಡಿದರು. ಯಾರೂ ವಿಶೇಷ ಸಾಮಗ್ರಿಗಳನ್ನು ತೆಗೆದುಕೊಂಡಿರಲಿಲ್ಲ. ಮೂರು ನಾಲ್ಕು ಹರದಾರಿ ಕಾಲು ನಡಿಗೆಯಿಂದ ಹೋಗಬೇಕಾದುದರಿಂದ, ಹೆಚ್ಚಿನ ಹೊರೆಯಿರುವುದು ಅಡಚಣೆಯೆಂದು ಅವರು ಭಾವಿಸಿದರು. ತೊಡಲು ಅಗತ್ಯವಾದ ಉಡುಪುಗಳು, ಪಯಣದ

ವೆಚ್ಚಕ್ಕಿರುವ ಹಣ, ಇವುಗಳನ್ನು ಮಾತ್ರ ಅವರು ತೆಗೆದುಕೊಂಡಿದ್ದರು. ಲಿಂಗಯ್ಯ ತಾನು ಮಗಳಿಗೆ ಬಳುವಳಿಕೊಡಲೆಂದು ತೆಗೆದಿಟ್ಟ ನಗಗಳ ಗಂಟನ್ನು ತೆಗೆದುಕೊಳ್ಳಲು ಮರೆತಿರಲಿಲ್ಲ

---

## ಹದಿನೈದು

ವರ್ಷಗಳು ಹದಿನೈದು ಕಳೆದುಹೋಗಿವೆ. ಈ ಕಾಲಾವಧಿ ಸಾಂತಣ್ಣ ನಲ್ಲಿ ಮಹತ್ತರವಾದ ಪರಿವರ್ತನೆಯನ್ನು ಮಾಡಿತು. ಪತ್ನೀಪುತ್ರರ ಮರಣ ಶೋಕ ಅವನ ಅಂತರಂಗದಲ್ಲಿ ಬೇರುಬಿಟ್ಟಿದ್ದು. ಮತ್ಸರ ವಿದ್ವೇಷಗಳ ಮುಳ್ಳು ಪೊದೆಯನ್ನು ಬೇರು ಸಹಿತ ಸುಟ್ಟು ಬೂದಿ ಮಾಡಿದ್ದಿತು. ಅವನೀಗ ಅಸೂಯೆಗಿಂತ ಮಿಗಿಲಾದ ಹಗೆಯೊಂದಿಲ್ಲ ಎಂಬ ಪಾಠವನ್ನು ಕಲಿತಿದ್ದ. ಆದರೆ ಆ ಪಾಠ ಕಲಿಯಲು ಅವನು ತೆತ್ತ ಬೆಲೆಯಾದರೂ ಬಹು ದೊಡ್ಡದು. ನಾಡಿನ ಹಿರಿಯರು "ಛಲದಿಂದ ಕೌರವ ಕೆಟ್ಟ, ಅಸೂಯೆಯಿಂದ ಸಾಂತಣ್ಣ ಕೆಟ್ಟ." ಎಂಬ ಒಂದು ಹೊಸ ಗಾದೆಯನ್ನೇ ಈಗ ನಿರ್ಮಾಣ ಮಾಡಿದ್ದರು. ಅವನ ಹೃದಯ ಜ್ವಾಲಾಮುಖಿಗೆ ತುತ್ತಾದ ಉದ್ಯಾನವಾಗಿದ್ದಿತು. ಆ ನೆಲದಲ್ಲಿ ಹೊಸ ಆಸೆಗಳ ಗಿಡಗಳು ಚಿಗುರುವಂತಿಲ್ಲ; ಹೊಸ ಹರುಷಗಳ ಬಳ್ಳಿಗಳು ಕೊನರಿ ಕುಡಿಯೊಡೆದು ದಾಂಗುಡಿಬಿಡುವಂತಿಲ್ಲ. ಉಲ್ಲಾಸದ ಹಚ್ಚನೆಯ ಹಸಿರು ಅಲ್ಲಿ ಗೋಚರಿಸದು. ಎಲ್ಲವೂ ಶೂನ್ಯವಾಗಿ ತೋರು ತಿದ್ದಿತು.

ದುಃಖಾಗ್ನಿಯಲ್ಲಿ ಬೆಂದ ರಾಜನಿಗೆ ಪ್ರಜೆಗಳ ದುಃಖ ನಿವಾರಣೆಯೇ ಮಿಗಿಲಾದ ಕರ್ತವ್ಯವೆನಿಸತೊಡಗಿತು. ಅವನು ನಾಡಿನ ಆಡಳಿತೆಯಲ್ಲಿ ಹೆಚ್ಚು ಶ್ರದ್ಧೆ ವಹಿಸತೊಡಗಿದ. ಅವನು ಶಾಸನವನ್ನು ಸೂಕ್ಷ್ಮವಾಗಿ ಪರಿ ಶೀಲಿಸತೊಡಗಿದಾಗ, ಆಡಳಿತದಲ್ಲಿರತಕ್ಕ ಅನೇಕ ನ್ಯೂನತೆಗಳು ಗೋಚರಿಸಿ ದುವು. ಅಧಿಕಾರಿಗಳ ಕಟ್ಟಳೆ ಕಾನೂನುಗಳಿಂದ ಪ್ರಜೆಗಳು ಬನ್ನಬಡು ತಿದ್ದರು. ಪ್ರಜೆಗಳ ಹಿತಸಾಧನೆಗಿಂತಲೂ ರಾಜಾನುಗ್ರಹ ಪಡೆಯುವುದು ಮಿಗಿಲಾದ ಕಾರ್ಯವೆಂದು ಅಧಿಕಾರಿಗಳು ಭಾವಿಸುತಿದ್ದರು. ಅವನು ಉಗ್ರ ಹಸ್ತದಿಂದ ಪ್ರಜಾಕಂಟಕರಾದ ಅಧಿಕಾರಿಗಳನ್ನು ದಂಡಿಸಿದ. ನ್ಯಾಯ ದಾನ ಕಟ್ಟುನಿಟ್ಟಾಗಿ ನಡೆಯುವಂತೆ ಅವನು ಏರ್ಪಾಡು ಮಾಡಿದ.

ಅರಸನ ಪ್ರಯತ್ನಗಳಿಂದ ಪ್ರಜೆಗಳು ಸುಖಿಗಳಾದರು. "ಸಾಂತಣ್ಣ ಒಡೆಯರ ಆಳಿಕೆಯಲ್ಲಿ ಹೊನ್ನಹಳ್ಳಿ ರಾಮರಾಜ್ಯವಾಯಿತು." ಎಂಬ ಒಂದು ಹೊಸ ನಾಡನುಡಿ ಜನರ ತುಟಿಗಳಲ್ಲಿ ನಲಿದಾಡತೊಡಗಿತು. ಪ್ರಜೆಗಳು ಸುಖಿಗಳಾದರೂ, ಸಾಂತಣ್ಣನಿಗೆ ಸೊಗವಿಲ್ಲದಾಯಿತು. ಮಡಿದ ಮಡದಿಯ ಚಿಂತೆ, ಸತ್ತ ಮಗನ ವ್ಯಸನ, ತೊರೆದ ಕೂಸಿಗಾಗಿ ಅಳಲು. ಅವನ ಬಾಳ್ವೆಯಲ್ಲಿ ಹಾಸುಹೊಕ್ಕಾಗಿದ್ದುವು. ಕೊಲ್ಲೂರು ಭಗವತಿಯ ವಾಣಿಯಂತೆ ಸಿಂಹಾಸನ ಶೂನ್ಯವಾಗುವದಲ್ಲ, ಎಂದು ಅವನು ವ್ಯಾಕುಲ ಪಡುತ್ತಿದ್ದ.

"ಅರಸ, ನಿನಗೆ ಪ್ರಾಯ ಏನೂ ಹೆಚ್ಚಾಗಿಲ್ಲ. ನೀನು ಇನ್ನೊಂದು ಮದುವೆ ಮಾಡಿಕೋ." ಅರಸನ ದುಃಖವನ್ನು ಅರಿತ ವಾಮನ ಶಾಸ್ತ್ರಿಗಳು ಹೇಳುತಿದ್ದರು: "ನಿನ್ನ ವಂಶವನ್ನು ಉದ್ಧರಿಸುವ ಮಗನೊಬ್ಬ ಉದಯಿಸಿಯಾನು."

ಕೈಹಿಡಿದ ರೇವಕ್ಕನನ್ನು ಒಗೆಬಗೆಯ ಬವಣೆಗಳಿಗೆ ಈಡುಮಾಡಿ ಮಸಣಕ್ಕಟ್ಟಿದೆ. ಈ ರಕ್ಕಸನ ಮಡದಿಯಾಗಲು ಯಾವ ಹೆಣ್ಣು ತಾನೇ ಒಪ್ಪಿಯಾಳು! ಅಲ್ಲದೆ ಗದ್ದುಗೆ ರೇವಕ್ಕನ ಸಂತತಿಗೇ ಹೋಗಬೇಕು."

"ರೇವಕ್ಕನ ಸಂತತಿ ಎಲ್ಲಿದೆ?" ಶಾಸ್ತ್ರಿಗಳು ವಿಸ್ಮಯದಿಂದ ಪ್ರಶ್ನಿಸಿದರು. ಅನಂತರ ಅರಸನು ತೊರೆದ ಹೆಣ್ಣುಕೂಸಿನ ನೆನಪು ಅವರ ಸ್ಮೃತಿಯಲ್ಲಿ ಮೂಡಿತು: "ನೀಲಣ್ಣ ಒಯ್ದ ಶಿಶುವೇ?"

"ಹೌದು, ಆ ಹಸುಳೆ ಎಲ್ಲಿಯೋ ಬದುಕಿರಬೇಕು ಎಂದು ನನಗನಿಸುತ್ತದೆ." ಸಾಂತಣ್ಣನ ಎದೆಯಿಂದ ನಿಟ್ಟುಸಿರೊಂದು ಹೊಮ್ಮಿತು: "ಹದಿನೈದು ವರ್ಷಗಳು ಕಳೆದರೂ ನೀಲಣ್ಣ ಮರಳಿ ಬಂದಿಲ್ಲ. ಅವನು ಕೂಸನ್ನು ತೊರೆಯಲಾರದೆ ಅನ್ಯನಾಡಿನಲ್ಲಿ ಜೀವಿಸುತ್ತಿರುವನೆಂದು ನನಗನಿಸುವುದು."

"ಹಾಗಿದ್ದರೆ, ನೀಲಣ್ಣ ತನ್ನ ಮಡದಿಗಾದರೂ ಸುದ್ದಿಯನ್ನು ತಿಳಿಸಬೇಡವೇ?" ಎಂದು ಶಾಸ್ತ್ರಿಗಳು ಉದ್ಗಾರವೆತ್ತಿದರು.

"ಅದೂ ನಿಜ, ಅವನ ಮಡದಿ ನಂಜಮ್ಮನ ಸ್ಥಿತಿಯನ್ನು ನೋಡುವಾಗ ಕಣ್ಣೀರು ಬರುವುದು." ದೊರೆ ಹೇಳಿದ: "ನಾನು ಅವಳಿಗೆ ಅರಮನೆಯಿಂದ ಮಾಸಾಶನ ಕೊಡಿಸಿದ್ದೇನೆ. ಅವಳು ಆಗಾಗ ಅರಮನೆಗೆ ಬಂದು ನನ್ನ ಯೋಗಕ್ಷೇಮಗಳನ್ನು ಆರೈದುಕೊಂಡು ಹೋಗುತ್ತಾಳೆ."

"ನಂಜವ್ವ ಮಾತಿನ ಮಲ್ಲಿಯಾದರೂ ಆಕೆ ಬಹು ಒಳ್ಳೆಯ ಜೀವ."

"ಅದನ್ನು ತಿಳಿಯಲಾರದ ಮೂರ್ಖ ನಾನು." ಎಂದು ದೊರೆ ಶೋಕೋದ್ಗಾರವೆತ್ತಿದ.

ಕೆಲವು ತಿಂಗಳು ಕಳೆದುವು. ಒಂದು ದಿನ ಸಾಂತಣ್ಣ, ಮಂತಣದ ಸಾಲೆಯಲ್ಲಿ ಕುಳಿತು ಅಧಿಕಾರಿಗಳಿಂದ ಬಂದ ಓಲೆಗಳನ್ನು ಪರಿಶೀಲಿಸುತಿದ್ದಾಗ, ಒಬ್ಬ ದೂತನು ಬಂದು, "ಮಹಾ ಪ್ರಭು, ಗಂಗವಳ್ಳಿಯಿಂದ ವೀರಣ್ಣ ದಂಡನಾಯಕರು, ಇಬ್ಬರು ಪುರುಷರೊಡನೆ ಮತ್ತು ಒಬ್ಬ ಹೆಣ್ಣುಮಗಳೊಡನೆ ಬಂದಿದ್ದಾರೆ" ಎಂಬ ವಿಶೇಷ ವಾರ್ತೆಯನ್ನು ಅರುಹಿದ.

"ಅವರನ್ನು ಆದರದಿಂದ ಕರೆದು ತಾ." ಎಂದು ರಾಜಾಜ್ಞೆಯಾಯಿತು.

ಅರಸನ ಸನ್ನಿಧಿಗೆ ವೀರಣ್ಣ, ಈಚಣ್ಣ, ಲಿಂಗಯ್ಯ ಮತ್ತು ಮಂಜಕ್ಕ ಇವರೊಡನೆ ಬಂದ. ವೀರಣ್ಣ ದೊರೆಯ ಪಾದಗಳಿಗೆ ಎರಗಲು ಅನುವಾದ. ಸಾಂತಣ್ಣ ಅವನನ್ನು ತಡೆದು, "ವೀರಣ್ಣ, ಈ ಪಾತಕಿಯ ಅಡಿಗಳಿಗೆರಗಬೇಡ. ತಂದೆಯಂತಿದ್ದ ನಿನಗೆ ಕೇಡು ಬಗೆದೆ. ನನ್ನನ್ನು ಮನ್ನಿಸು." ಎಂದು ದಂಡನಾಯಕನನ್ನು ಅಪ್ಪಿಕೊಂಡ. ಅರಸನ ಕಣ್ಣುಗಳಿಂದ ಚಿಮ್ಮಿದ ಅಶ್ರುಗಳು ವೀರಣ್ಣನ ಎದೆಯನ್ನು ನಾಂದಿದುವು.

"ಒಡೆಯರನ್ನು ಕ್ಷಮಿಸಲು ನಾನು ಯಾರು! ಹಿಂದೆ ತಾವು ನನ್ನನ್ನು ಪೋಷಿಸಿದಂತೆ ಈಗಲೂ ಸಲಹಿರಿ. ಇವರು ಗಂಗವಳ್ಳಿಯ ರಾಜಕುಮಾರರು. ನನ್ನೊಡನೆ ದಯಮಾಡಿಸಿದ್ದಾರೆ."

ಎಂದು ವೀರಣ್ಣ ದೊರೆಗೆ ಈಚಣ್ಣನ ಪರಿಚಯವನ್ನು ಮಾಡಿದ. ಸಾಂತಣ್ಣ "ನೀನು ನಮ್ಮ ಆಸ್ಥಾನಕ್ಕೆ ಬಂದುದರಿಂದ ನನಗೆ ಬಹು ಸಂತೋಷವಾಯಿತು. ನಾನೂ ಹನುಮಣ್ಣನೂ ಬಾಲ್ಯದ ಗೆಳೆಯರು. ಒಂದು ವಿಷಗಳಿಗೆಯಲ್ಲಿ ನನ್ನಲ್ಲಿ ತೋರಿದ ದುರ್ಬುದ್ಧಿ ನಮ್ಮಿಬ್ಬರಲ್ಲಿ ವಿರಸವನ್ನುಂಟುಮಾಡಿತು." ಎಂದು ನುಡಿದು ದೊರೆ ರಾಜಕುಮಾರನಿಗೆ ಸ್ವಾಗತ ನೀಡಿದ.

ವೀರಣ್ಣ, ಮಂಜಕ್ಕ ಈಚಣ್ಣರ ಪ್ರಣಯದ ಕತೆಯನ್ನು ದೊರೆಗೆ ವಿವರಿಸಿ ಹೇಳಿದ. ಅನಂತರ "ತಾವು ಮೆಚ್ಚಿದ ಹೆಣ್ಣನ್ನು ಬಿಡಲಾರದೆ, ಅವರು ತಮ್ಮ ಆಶ್ರಯಪಡೆದು ತಂದೆಯ ಕೋಪದಿಂದ ಪಾರಾಗಲು ಇಲ್ಲಿಗೆ ಬಂದಿರುವರು. ಈಕೆಯೇ ರಾಜಕುಮಾರರ ಹೃದಯೇಶ್ವರಿ. ಈ ಮುದುಕನೇ ಹೆಣ್ಣಿನ ತಂದೆ ಲಿಂಗಯ್ಯ." ಎಂದು ಅರಸನಿಗೆ ಹೇಳಿದ.

ದೊರೆ ಲಿಂಗಯ್ಯನ ಬೆನ್ನಹಿಂದೆ ನಿಂತಿದ್ದ ಮಂಜಕ್ಕನ ಮೋರೆಯನ್ನು ನಿಟ್ಟಿಸಿ ನೋಡಿದ. ಆಕೆಯ ಆಕೃತಿ ಸಾಂತಣ್ಣನನ್ನು ಹದಿನೈದು ವರ್ಷಗಳ ಹಿಂದೆ ಸೆಳೆದೊಯ್ದಿತು. ಅವನು ಮೃತಳಾದ ರಾಣಿ ರೇವಕ್ಕನನ್ನು ನೋಡು ವಂತೆ ಮಾಡಿತು. ಆ ಮೊಗದ ಮಾಟ, ಕಣ್ಣುಗಳ ಹೊಳಪು, ಹುಬ್ಬುಗಳ ಕೊಂಕು, ಮೂಗಿನ ಅಂದ, ತುಟಿಗಳಲ್ಲಿ ನಲಿದಾಡುವ ಮುಗುಳ್ನಗೆ, ಕೂದಲು ಇವೆಲ್ಲ ರೇವಕ್ಕನವು! ರೇವಕ್ಕನೇ ತನ್ನ ಮುಂದೆ ನಿಂತಂತೆ ಭಾಸ ವಾಯಿತು ಅರಸನಿಗೆ.

"ಈಕೆ ನಿನ್ನ ಮಗಳೇ?" ದೊರೆ ಮಂಜಕ್ಕನ ಮೋರೆಯಿಂದ ಕಣ್ಣು ಕೀಳದೆ ಲಿಂಗಯ್ಯನನ್ನು ಪ್ರಶ್ನಿಸಿದ.

"ಹೌದು, ನನ್ನೊಡೆಯ." ಎಂದು ಲಿಂಗಯ್ಯ ಅಳುಕುತ್ತಾ ನುಡಿದ.

"ನಿಜ ಹೇಳು. ಈಕೆ ನಿನ್ನ ಮಗಳಲ್ಲವೆಂದು ನನ್ನ ಅಂತರಂಗ ಹೇಳು ತ್ತಿದೆ. ಇವಳನ್ನು ನಿನ್ನ ಮಗಳೆಂದು ನಾನು ನಂಬಲಾರೆ." ಎಂದು ದೊರೆ ಉಚ್ಚ ಸ್ವರದಲ್ಲಿ ಹೇಳಿದ. ಅವನ ಕಣ್ಣುಗಳು ಬೆಂಕಿಯ ಕೆಂಡಗಳಾಗಿದ್ದುವು. ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತಿದ್ದಿತು.

ರಾಜನ ವರ್ತನೆ ವೀರಣ್ಣ ಈಚಣ್ಣರನ್ನು ವಿಸ್ಮಯದ ಕಡಲಲ್ಲಿ ಅದ್ದಿತು. ಲಿಂಗಯ್ಯ ಬಿಳುಪೇರಿದ ಮೋರೆಯೊಡನೆ ನಡುಗುತ್ತಾ ನಿಂತ.

"ಬೇಗ ನಿಜ ಹೇಳು. ಇವಳು ನಿನ್ನ ಮಗಳಲ್ಲ!" ರಾಜನ ಕೊರಳಿಂದ ಕ್ರೋಧಸ್ವರ ಹೊಮ್ಮಿತು.

"ತಮ್ಮ ಮಾತು ನಿಜ. ಇವಳು ನನ್ನ ಮಗಳಲ್ಲ." ಲಿಂಗಯ್ಯ ತತ್ತ ರಿಸುತ್ತಾ ಮಾರ್ನುಡಿದ.

"ನಿನ್ನ ಮಗಳಲ್ಲವೆ!" ಲಿಂಗಯ್ಯನ ನುಡಿಗೇಳಿ ದೊರೆಯ ಹೃದಯ ಹಗುರವಾಯಿತು. ಎದೆಯಲ್ಲಿ ನಟ್ಟಿದ್ದ ಸರಳನ್ನು ಕಿತ್ತು ತೆಗೆದಂತಾಯಿತು. ಅವನು ಉತ್ಸುಕತೆಯಿಂದ ಪ್ರಶ್ನಿಸಿದ: "ಹಾಗಾದರೆ ಇವಳು ಯಾರ ಮಗಳು?"

"ಈಕೆ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳಲ್ಲ. ಆದರೆ ನಾನು ಸಾಕಿ ದುದರಿಂದ ಇವಳು ನನ್ನ ಮಗಳೇ ಆಗಿರುವಳು." ಎಂದು ಹೇಳುತ್ತಾ ಲಿಂಗಯ್ಯ ಹದಿನೈದು ವರ್ಷಗಳ ಹಿಂದೆ ನಡೆದ ಘಟನೆಗಳನ್ನು ಅರಸನಿಗೆ ವಿವ ರಿಸಿ ಹೇಳಿದ.

"ನಿನಗೆ ದೊರಕಿದ ಆ ಒಡವೆಗಳೆಲ್ಲಿ?" ರಾಜ ಲಿಂಗಯ್ಯನನ್ನು ಕೇಳಿದ.

"ಇವೆ ನನ್ನೊಡೆಯ. ಮಂಜುಗೆ ಬಳುವಳಿ ಕೊಡಲೆಂದು ಅವನ್ನು ನಾನು ಜೋಪಾನ ಮಾಡಿದ್ದೇನೆ. ಇಲ್ಲಿಗೆ ಬರುವಾಗ ಅವುಗಳನ್ನೂ ತಂದಿದ್ದೇನೆ." ಎಂದು ಹೇಳಿ ಲಿಂಗಯ್ಯ ಹೆಗಲಮೇಲಿದ್ದ ಭಾಂಡವನ್ನು ಇಳಿಸಿ ಬಿಚ್ಚಿದ. ಅದರೊಳಗಿಂದ ರೇಷ್ಮೆ ಅರಿವೆಯಲ್ಲಿ ಕಟ್ಟಿದ ಒಂದು ಪುಟ್ಟ ಗಂಟನ್ನು ಹೊರತೆಗೆದ. ಅದನ್ನು ಬಿಚ್ಚಲು ಅದರೊಳಗೆ ಬಗೆಬಗೆಯ ಆಭರಣಗಳಿದ್ದುವು.

ಅರಸನು ಒಡವೆಗಳನ್ನು ಒಂದೊಂದಾಗಿ ಪರೀಕ್ಷಿಸಿದ. ದೊಡ್ಡ ಮುತ್ತಿನ ಹಾರವನ್ನು ಕೈಯಲ್ಲಿ ತೆಗೆದುಕೊಂಡು ಅವನು ನೋಡಿದ. "ಈ ಹಾರವನ್ನು ನಿನ್ನೆ ದಿನ ನಾನು ನೋಡಿದಂತೆ ಭಾಸವಾಗುತ್ತದೆ. ತಿರುವಂಜಿಕುಳದಿಂದ ಬಂದ ವರ್ತಕರಿಂದ ಒಂದು ಸಾವಿರ ವರಹ ಕೊಟ್ಟು ಕೊಂಡುಕೊಂಡೆ. ಅದನ್ನೇ ನಾನು ರೇವಕ್ಕನಿಗೆ ಮೆಚ್ಚು ಕೊಟ್ಟೆ" ಎಂದು ಅರಸು ಹಿಂದಿನ ಘಟನೆಯೊಂದನ್ನು ಸ್ಮರಿಸಿದ.

ಆ ನಗಗಳ ಮಧ್ಯದಲ್ಲಿ ತಾಮ್ರದ ಒಂದು ಸಣ್ಣ ಓಲೆಯಿದ್ದಿತು. ಅರಸ ಅದನ್ನು ಕೈಯಲ್ಲಿ ತೆಗೆದುಕೊಂಡ. ಅದರ ಮೇಲಿದ್ದ ಬರಹ ಸ್ಪಷ್ಟವಾಗಿ ಗೋಚರಿಸುತ್ತಿರಲಿಲ್ಲ. ಅವನು ಬರಹವೇನೆಂಬುದನ್ನು ತಿಳಿಯಲು ತಾಂಬೂಲ ಕರಂಡಕದಿಂದ ಸುಣ್ಣವನ್ನು ತೆಗೆದು ತಗಡಿನ ಮೇಲೆ ಉಜ್ಜಿದ. ಕಿಲುಬು ಮಾಯವಾಗಿ ಬರಹ ಮಸುಕಾಗಿ ಕಾಣತೊಡಗಿತು. ಆದರೆ ಅರಸನ ದೃಷ್ಟಿ ಮಂದವಾಗಿತ್ತು. ಅವನು ತಾಮ್ರ ಪಟ್ಟವನ್ನು ಈಚಣ್ಣನ ಕೈಗೆ ನೀಡಿ, ಗಂಗವಳ್ಳಿಯ ರಾಜಕುಮಾರರು ಈ ಬರಹವನ್ನು ಓದಬೇಕು." ಎಂದು ವಿನಂತಿಸಿದ.

"ಈ ಹೊಂದಳಿಗೆಯಲ್ಲಿರುವ ಹೆಣ್ಣುಕೂಸು ಹೊನ್ನ ಹಳ್ಳಿಯ ಅರಸರಾದ ಸಾಂತಣ್ಣ ಪ್ರಭುಗಳ ರಾಣಿ ರೇವಕ್ಕನ ಗರ್ಭದಲ್ಲಿ ಹುಟ್ಟಿದ ಶಿಶುವಾಗಿದೆ. ಈ ಮಗು ತಂದೆಯ ಕೋಪಕ್ಕೆ ತುತ್ತಾದುದರಿಂದ, ರಾಜಾಜ್ಞೆಯಂತೆ ಸಾಂತಣ್ಣ ಒಡೆಯರ ಚರಣಸೇವಕನಾದ ನೀಲಣ್ಣನು ಈ ಹಸುಳೆಯನ್ನು ನಿರ್ಜನ ಪ್ರದೇಶದಲ್ಲಿ ತೊರೆದಿರುವನು. ದಯಾರ್ದ್ರ ಹೃದಯರು ಶಿಶುವನ್ನು ಕೈಗೊಂಡು ಪೋಷಿಸುವುದು. ಇತಿ ನೀಲಣ್ಣ."

ಎಂದು ರಾಜಕುಮಾರ ತಾಮ್ರಪಟ್ಟದ ಒಕ್ಕಣೆಯನ್ನು ಓದಿದ. ಆ ತಾಮ್ರದ ತಗಡು ಮಂಜಕ್ಕ ದೊರೆಮಗಳೆಂದು ಸಾಕ್ಷಿ ನುಡಿಯಿತು.

"ಮಗು, ನಿನ್ನನ್ನು ತೊರೆದ ಪಾಪಿ ನಾನು!" ಎಂದು ಅಳುತ್ತಾ ಅರಸನು ಎರಡು ತೋಳುಗಳನ್ನು ಚಾಚಿ ಮಂಜಕ್ಕನನ್ನು ತನ್ನ ಎದೆಗಪ್ಪಿಕೊಂಡ. ನೇತ್ರಗಳಿಂದ ಹರಿಯುತ್ತಿರುವ ಬಾಷ್ಪ ಸ್ರೋತದಿಂದ ಮಂಜಕ್ಕನ ನೆತ್ತಿಯ ಮೇಲೆ ಅಭಿಷೇಕ ಮಾಡಿದ. "ಮಗೂ,—ಈಗ ನೀನು ನನ್ನನ್ನು ತೊರೆಯ ಬೇಡ. ಮುಯ್ಯಿಗೆ ಮುಯ್ಯಿ ತೀರಿಸುವ ಪಣತೊಡಬೇಡ. ನನ್ನನ್ನುಮನ್ನಿಸು."

ಈ ದೃಶ್ಯವನ್ನು ಕಂಡು ಉಳಿದವರ ಹೃದಯಗಳು ಕರಗಿಹೋದುವು. ಯಾರ ಬಾಯಿಯಿಂದಲೂ ಮಾತು ಹೊರಡದು. ಸಂತೋಷದ ಬುಗ್ಗೆ ಅವರ ಹೃದಯಗಳಲ್ಲಿ ಒಸರುತ್ತಿದ್ದಿತು.

"ಅಪ್ಪಾ, ತಂದೆಯನ್ನು ಮಗಳು ಕ್ಷಮಿಸುವುದೇ? ಎಳವೆಯಲ್ಲಿ ನಿನ್ನ ಪಾದ ಸೇವೆಯನ್ನು ಮಾಡುವ ಪುಣ್ಯವನ್ನು ದೇವರು ಒದಗಿಸಲಿಲ್ಲ. ಈಗಲಾ ದರೂ ನಿನ್ನ ಚರಣ ಸನ್ನಿಧಿಯನ್ನು ಸೇರುವ ಭಾಗ್ಯವನ್ನು ದೇವರು ಕರುಣಿಸಿ ದನಲ್ಲ!" ಎಂದು ಮಂಜಕ್ಕ ಮಾರ್ನುಡಿದು ತಂದೆಯ ಅಡಿಗಳಿಗೆ ಮಣಿದಳು.

"ಮಗಳೇ ವಯಸ್ಸಿನಲ್ಲಿ ನಾನು ಹಿರಿಯ; ಆದರೆ ಉದಾರತೆಯಲ್ಲಿ ನೀನು ಹಿರಿಯಳು!

"ಕಡಲ ನೀರು ಕಡಲನ್ನು ಸೇರಿತು!" ಸಂತಸದ ನುಡಿ ವೀರಣ್ಣನ ಕೊರಳಿಂದ ಹೊಮ್ಮಿತು.

"ರಾಜಕುಮಾರ", ದೊರೆ ದೃಷ್ಟಿಯನ್ನು ಈಚಣ್ಣನ ಮೊಗದತ್ತ ಹೊರ ಳಿಸಿದ: "ನನ್ನ ಮಗಳು ನನ್ನ ಸನ್ನಿಧಿಯನ್ನು ಸೇರಲು ನೀನು ಕಾರಣನಾದು ದರಿಂದ ನೀನು ಗೆಳೆಯನ ಮಗನು ಮಾತ್ರವಲ್ಲ; ನನ್ನ ಮಗನೂ ಆಗಿ ದ್ದೀಯೆ. ನನ್ನ ಮಗಳಿಗೋಸುಗ ತಂದೆಯನ್ನೂ, ನಾಡನ್ನೂ ತೊರೆದು ಬಂದಿದ್ದೀಯೆ. ಈಗ ನನ್ನ ಸಿಂಹಾಸನವನ್ನೇ ನಿನಗೆ ಬಳುವಳಿಯಾಗಿ ಕೊಡುವೆನು."

ಅಷ್ಟರಲ್ಲಿ ಒಬ್ಬ ದೂತನು ಬಂದು, "ಪ್ರಭೂ, ಗಂಗವಳ್ಳಿಯ ಅರಸರು ತಮ್ಮ ದರ್ಶನಕ್ಕೋಸ್ಕರ ಬಂದಿರುವರು." ಎಂಬ ವಾರ್ತೆಯನ್ನು ಅರುಹಿದ.

ತಂದೆ ಹೊನ್ನಹಳ್ಳಿಗೆ ಬಂದ ವಾರ್ತೆಯನ್ನರಿಯಲು ಈಚಣ್ಣನ ಮೊಗ ಬಿಳಿಪೇರಿತು. ಅದನ್ನು ನೋಡಿದ ಸಾಂತಣ್ಣ, "ನೀನು ಭಯಪಡಬೇಡ. ಆತನನ್ನು ಕರೆತಂದು ನಾನು ಸಮಾಧಾನ ಪಡಿಸುವೆನು." ಎಂಬ ಆಶ್ವಾಸನೆ ಯನ್ನು ನೀಡಿದ.

# ಹದಿನಾರು

ವೀರಣ್ಣನ ಸಲಹೆಯಂತೆ ಮಗನನ್ನು ಕಲ್ಲೂರಲ್ಲಿ ಬಿಟ್ಟುಬಂದ ಹನುಮಣ್ಣ ದಾರಿಯುದ್ದಕ್ಕೂ ಆಲೋಚಿಸತೊಡಗಿದ. ತಾನು ಈಚಣ್ಣನನ್ನು ಅಲ್ಲಿ ಬಿಟ್ಟುಬಂದುದು ಅವನ ಬುದ್ಧಿಗೆ ಸಮಂಜಸವಾಗಿ ತೋರಲಿಲ್ಲ. ಅವನ ಚಿತ್ತ ಚಿಂತೆಯ ಕಡಲಲ್ಲಿ ತೇಲಿತು. ಅವನು ಅರಮನೆಯನ್ನು ಸೇರಿ ಒಂದು ದಿನ ಕಳೆದರೂ, ರಾಜಕುಮಾರನಾಗಲೀ, ವೀರಣ್ಣನಾಗಲೀ ರಾಜಧಾನಿಗೆ ಮರಳಲಿಲ್ಲ. ಅವನ ಸಂದೇಹ ಬಲಿಯತೊಡಗಿತು. ವೀರಣ್ಣ ರಾಜಕುಮಾರನ ಪಕ್ಷವಹಿಸಿ ಮಾತಾಡಿದುದು ದೊರೆಗೆ ನೆನಪಾಯಿತು. ವೀರಣ್ಣ ದೊರೆ ಮಗನು ಬೇಸಾಯಗಾರನ ಮಗಳನ್ನು ಮದುವೆಯಾಗಲು ಅನುಕೂಲಿಸಬಹುದು ಎಂದು ಅವನು ಶಂಕಿಸತೊಡಗಿದ.

ದೊರೆ ಗೂಢಚಾರರನ್ನು ಕರೆದು, ಅವರು ಈಚಣ್ಣ ವೀರಣ್ಣರ ಮೇಲೆ ಕಣ್ಣಿಡುವಂತೆ ಆಜ್ಞಾಪಿಸಿದ. ಚಾರರು ಕಲ್ಲೂರಿಗೆ ಹೋಗಿ ಸುದ್ದಿಯನ್ನು ತೆಗೆದುಕೊಂಡು ಬಂದರು. ಆ ವಾರ್ತೆ ಸಂತೋಷದಾಯಕವಾಗಿರಲಿಲ್ಲ. ವೀರಣ್ಣ ಈಚಣ್ಣರು ಲಿಂಗಯ್ಯನನ್ನೂ ಮಂಜಕ್ಕನನ್ನೂ ಕರೆದುಕೊಂಡು ಬಾರಕೂರಿನ ದಾರಿಯನ್ನು ಹಿಡಿದರೆಂದು ಅವರು ದೊರೆಗೆ ತಿಳಿಸಿದರು.

ವೀರಣ್ಣ ಸ್ವದೇಶಕ್ಕೆ ಮರಳಲು ಉತ್ಸುಕನಾಗಿದ್ದನೆಂಬುದನ್ನು ದೊರೆ ತಿಳಿದಿದ್ದ. ಅರಸನು ತಡೆದುದರಿಂದ ಅವನು ಈ ತನಕ ಹೊನ್ನಹಳ್ಳಿಗೆ ಹೋಗದೆ ಉಳಿದಿದ್ದ. ತಾನು ಈಚಣ್ಣ ಮಂಜಕ್ಕ—ಇವರ ವಿವಾಹಕ್ಕೆ ವಿಘ್ನವಾದುದರಿಂದ, ತನ್ನ ಕೋಪದಿಂದ ಪಾರಾಗಲು ಹೊನ್ನಹಳ್ಳಿಗೆ ಹೋಗುವುದು ಲೇಸೆಂದು ವೀರಣ್ಣ ಸಲಹೆಯನ್ನು ನೀಡಬಹುದು ಎಂದು ಅರಸನಿಗೆ ಅನಿಸಿತು. ಅವನು ಈಚಣ್ಣನನ್ನೂ, ಆ ತಂದೆ ಮಗಳಂದಿರನ್ನೂ ಕರೆದುಕೊಂಡು ಹೊನ್ನಹಳ್ಳಿಗೆ ನಾವೆಯನ್ನೇರಿರಬಹುದು ಎಂದು ದೊರೆ ಊಹಿಸಿದ.

ಹನುಮಣ್ಣನಿಗೆ ವೀರಣ್ಣನ ಮೇಲೆ ಬಹಳ ಸಿಟ್ಟುಬಂತು. ಆತನು ರಾಜಕುಮಾರನನ್ನು ಸಂತೋಷಗೊಳಿಸಲು ತನಗೆ ದ್ರೋಹ ಬಗೆದನೆಂದು ಅರಸನು ನಿರ್ಧರಿಸಿದ. ಅವನು, ರಾಜಕುಮಾರನು ಮಂಜಕ್ಕನನ್ನು ಮದುವೆಯಾಗುವುದಾದರೆ, ಸಿಂಹಾಸನಕ್ಕೆ ಮಗನು ಹಕ್ಕುದಾರನಲ್ಲವೆಂದು ಸಾರುವುದಾಗಿ ಕೋಪದ ಭರದಲ್ಲಿ ಹೇಳಿದ್ದ. ಈಗ ತನ್ನ ಮಾತಿನ ಪರಿಣಾಮದ ವ್ಯಾಪ್ತಿ ಅರಸನಿಗಾಗತೊಡಗಿತು. ತನ್ನ ಅನಂತರ ಸಿಂಹಾಸನ ಶೂನ್ಯವಾ

ಗುವುದು; ತನ್ನ ವೃದ್ಧಾಪ್ಯದಲ್ಲಿ ರಾಜ್ಯಾಡಳಿತದ ಹೊರೆಗೆ ಹೆಗಲುಗೊಡಲು ಮಗನಿಲ್ಲ. ಎಂದು ಆಲೋಚಿಸಿದಾಗ ಅರಸನ ಕಣ್ಣುಗಳಿಗೆ ಕತ್ತಲೆ ಕವಿದಂತಾಯಿತು. ಅವನಿಗೆ ಮಗನನ್ನು ತೊರೆದಿರಲು ಸಾಧ್ಯವಿಲ್ಲ ಎಂಬುದು ಅರಿವಾಯಿತು.

ದೊರೆಯ ಬುದ್ಧಿ ಶೀಘ್ರವಾಗಿ ಆಲೋಚನೆಗೈದಿತು. ತಾನು ಹೊನ್ನಹಳ್ಳಿಗೆ ಹೋಗಿ ಸಾಂತಣ್ಣನ ಆಶ್ರಯವನ್ನು ಸೇರಿದ ಮಗನನ್ನು ಕರೆದುಕೊಂಡು ಬರುವುದು ಲೇಸೆಂದು ಅವನು ತೀರ್ಮಾನಿಸಿದ. ಒಡನೆ ಅವನು ನಾವೆಯನ್ನು ಸಿದ್ಧಗೊಳಿಸಲು ಆಳುಗಳಿಗೆ ಆಜ್ಞಾಪಿಸಿದ. ಅವನು ನೌಕೆಯನ್ನೇರಿ ಕೆಲ ದಿನಗಳಲ್ಲಿಯೇ ಹೊನ್ನಹಳ್ಳಿಯನ್ನು ಸೇರಿದ.

ಸಾಂತಣ್ಣ ಆದರದಿಂದ ಗೆಳೆಯನನ್ನು ಬರಮಾಡಿಕೊಂಡ. ಹಿಂದೆ ಮಿತ್ರನನ್ನು ಸತ್ಕರಿಸಿ ಉಪಚರಿಸಲು ರಾಣಿ ಇದ್ದಳು. ಆದರೆ ಈಗ ತನ್ನ ದುರ್ಬುದ್ಧಿಯಿಂದ ಆಕೆಯನ್ನು ಕಳೆದುಕೊಂಡು ತಾನು ಏಕಾಂಗಿಯಾಗಿರುವೆನೆಂದು ಸಾಂತಣ್ಣ ಗೆಳೆಯನಿಗೆ ಅರುಹಿದ. ಅವನು ಗೆಳೆಯನನ್ನು ಅಪ್ಪಿಕೊಂಡು, "ಹನುಮಣ್ಣ—ನಾನು ನಿನ್ನ ಮೇಲೆ ಅಪವಾದದ ಹೊರೆಯನ್ನು ಹೊರಿಸಿದೆ; ನಿನ್ನನ್ನು ವಧಿಸಬೇಕೆಂಬ ಪಾತಕವನ್ನು ಆಲೋಚಿಸಿದೆ. ಆದರೆ ವೀರಣ್ಣನ ವಿವೇಕ ನನ್ನನ್ನು ಕಾಪಾಡಿತು. ಈ ಮಿತ್ರದ್ರೋಹಿಯನ್ನು ಕ್ಷಮಿಸು." ಎಂದು ಬೇಡಿಕೊಂಡ.

ಗೆಳೆಯನ ಇರವು ಆತ ಪಶ್ಚಾತ್ತಾಪದ ಯಜ್ಞಕುಂಡದಲ್ಲಿ ಮಾತ್ಸರ್ಯ ವಿದ್ವೇಷಗಳನ್ನು ಹೋಮಿಸಿ—ಈಗ ಬಂಗಾರವಾಗಿದ್ದಾನೆಂಬುದನ್ನು ಹನುಮಣ್ಣನಿಗೆ ತಿಳಿಸಿತು. ಆ ಹಳೆಯ ನೆನಪುಗಳನ್ನು ಕೆದಕಿ ಮನಸ್ಸಿನಲ್ಲಿ ದುಗುಡವನ್ನು ತುಂಬಿಕೊಳ್ಳಲು ಅವನು ಒಪ್ಪಲಿಲ್ಲ. ಆದುದರಿಂದ ಆತ, "ಸಾಂತಣ್ಣ ಒಂದು ವಿಷಗಳಿಗೆಯಲ್ಲಿ ನಿನ್ನ ಆಲೋಚನೆ ಅವಿವೇಕದ ಹಾದಿಯನ್ನು ಹಿಡಿಯಿತು. ಅದರ ಫಲವಾಗಿ ನೀನೇ ಎಲ್ಲರಿಗಿಂತಲೂ ಹೆಚ್ಚು ದುರಿತ ಸಂಕಟಗಳನ್ನು ಅನುಭವಿಸಿದೆ. ದೈವವೇ ನಿನ್ನನ್ನು ದಂಡಿಸಿ ನಿನ್ನಲ್ಲಿ ವಿವೇಕ ಉದಿಸುವಂತೆ ಮಾಡಿದೆ. ಈ ವರೆಗೆ ನಡೆದುದನ್ನೆಲ್ಲಾ ಒಂದು ಕೆಟ್ಟ ಕನಸೆಂದು ನಾವು ತಿಳಿಯೋಣ." ಎಂದು ಮಿತ್ರನನ್ನು ಸಾಂತ್ವನಗೊಳಿಸಿದ.

ಸಾಂತಣ್ಣ ತಾನು ಲಿಂಗಯ್ಯನಿಂದ ತಿಳಿದುದನ್ನೆಲ್ಲಾ ಮಿತ್ರನಿಗೆ ಹೇಳಿ,

ನಗಗಳ ರಾಶಿಯಲ್ಲಿ ದೊರೆತ ತಾಮ್ರ ಪಟ್ಟವನ್ನು ತೋರಿಸಿದ. ಹನುಮಣ್ಣ ಅದನ್ನು ಓದಿ ಮಂಜಕ್ಕ ಯಾರೆಂಬುದನ್ನು ತಿಳಿದುಕೊಂಡ. ತನ್ನ ಮಗ ಪ್ರೀತಿಸಿದುದು ಒಕ್ಕಲಿಗರ ಹೆಣ್ಣನ್ನಲ್ಲ; ಹೊನ್ನ ಹಳ್ಳಿಯ ರಾಜಕುಮಾರಿಯನ್ನು ಎಂಬುದು ಅರಿವಾದಾಗ, ದುಗುಡದ ಮುಂಜುಕವಿದ ಅವನ ಚಿತ್ತದಲ್ಲಿ ಹರುಷದ ಸೂರ್ಯೋದಯವಾಯಿತು. ವೀರಣ್ಣನ ಮೇಲೆ ತೋರಿದ್ದ ಮುನಿಸು ಮೆಚ್ಚಿಕೆಯ ರೂಪತಾಳಿತು.

"ಹನುಮಣ್ಣ, ನನ್ನ ಕುಮಾರಿಯನ್ನು ನಿನ್ನ ಮಗನಿಗೆ ಕೊಟ್ಟು ಲಗ್ನ ಮಾಡಬೇಕೆಂದು ನಾನು ಆಲೋಚಿಸಿದ್ದೇನೆ. ನಿನ್ನ ಅಭಿಪ್ರಾಯವೇನು?" ಸಾಂತಣ್ಣ ಗೆಳೆಯನ ಅಭಿಪ್ರಾಯವನ್ನು ತಿಳಿಯಲೆತ್ನಿಸಿದ. "ಅವರಿಬ್ಬರೂ ಪರಸ್ಪರ ಮೆಚ್ಚಿದ್ದಾರೆ."

"ಈ ತನಕ ನಾವು ಗೆಳೆಯರಾಗಿದ್ದೆವು. ಇನ್ನು ಮುಂದೆ ನಾವು ಬಂಧುಗಳಾಗಿ ಜೀವಿಸುವ ಸುಯೋಗವನ್ನು ದೈವವು ಕರುಣಿಸಿರುವಾಗ, ನಾನೇಕೆ ಅದನ್ನು ತಿರಸ್ಕರಿಸಲಿ!" ಎಂದು ಹನುಮಣ್ಣ ಹೊನ್ನ ಹಳ್ಳಿಯ ದೊರೆಯ ಅಭಿಪ್ರಾಯವನ್ನು ಅನುಮೋದಿಸಿದ.

ತಾನು ಮಂಜಕ್ಕನನ್ನು ವಿವಾಹವಾಗಲು ತಂದೆ ಅನುಮತಿಸಿದುದನ್ನು ತಿಳಿದು ಈಚಣ್ಣನಿಗೆ ಅಪರಿಮಿತ ಸಂತೋಷವಾಯಿತು. ಅವನು ತಂದೆಯ ಅಡಿಗಳಿಗೆರಗಿ "ನಾನು ನಿನ್ನ ಆಜ್ಞೆಯನ್ನು ಮೀರಿ ದುಡುಕಿದೆ. ನನ್ನ ತಪ್ಪನ್ನು ಮನ್ನಿಸು." ಎಂದು ಬಿನ್ನವಿಸಿದ.

"ಈಚಣ್ಣ, ನೀನು ಮಾಡಿದ ಕೆಲಸ ಸಾಂತಣ್ಣನ ಭಾಗ್ಯ ಕುಸುಮವನ್ನು ಅರಳಿಸಿತು. ನೀನು ನನ್ನ ಆಜ್ಞೆಯನ್ನು ಮೀರದಿದ್ದರೆ ಹೊನ್ನಹಳ್ಳಿಯ ದೊರೆಗೆ ಕಳೆದು ಹೋದ ಮಗಳು ದೊರೆಯುತ್ತಿರಲಿಲ್ಲ." ಎಂಬ ನುಡಿ ಹನುಮಣ್ಣನ ಕೊರಳಿಂದ ಹೊರಟಿತು. ಅವನು ಪ್ರೀತಿಯಿಂದ ಮಗನ ಬೆನ್ನನ್ನು ನೇವರಿಸಿದ.

ಕಳೆದು ಹೋದ ಮಗಳು ದೊರೆಗೆ ಸಿಕ್ಕಿದ ವಾರ್ತೆ ರಾಜಧಾನಿಯಲ್ಲೆಲ್ಲಾ ವ್ಯಾಪಿಸಿತು. ದೊರೆಯೊಡನೆ ಪ್ರಜೆಗಳು ಹರ್ಷಸಾಗರದಲ್ಲಿ ತೇಲಿದರು. ಎಲ್ಲರಿಗಿಂತಲೂ ಮಿಗಿಲಾಗಿ ಸಂತಸಪಟ್ಟಳು ನಂಜಮ್ಮ. ದೊರೆ ಮಗಳನ್ನು ಕಾಣಲೆಂದು ಅವಳು ರಾಜಸನ್ನಿಧಿಗೆ ಬಂದಳು. ಅರಸನು "ನಂಜಮ್ಮ, ಅಂದು ನಿನ್ನ ನುಡಿಯನ್ನು ಕಿವಿಗಳಿಗೆ ಹಾಕಿಕೊಳ್ಳದೆ ಮಾಡಿದ ತಪ್ಪನ್ನು ನೇರ್ಪಡಿಸಲು ಹದಿನೈದು ವರ್ಷಗಳು ಬೇಕಾದುವು. ಆದರೂ ಆದ

ನಷ್ಟವೆಲ್ಲ ನೀಗಿಲ್ಲ. ಈ ಸಂತಸವನ್ನು ನೋಡಲು ರೇವಕ್ಕ ಇರುತಿದ್ದರೆ"—ಎಂದು ಹೇಳುತ್ತಾ ರಾಣಿಯನ್ನು ನೆನೆದು ಕಣ್ಣುಗಳಲ್ಲಿ ನೀರು ತಂದುಕೊಂಡ.

"ಒಡೆಯರೇ, ನನ್ನ ಅಪ್ಪಣೆಯಂತೆ ಒಬ್ಬ ಶಿಲ್ಪಿ ರಾಣಿಯವರ ಪೂರ್ಣ ವಿಗ್ರಹವೊಂದನ್ನು ಕೆತ್ತಿದ್ದಾನೆ." ನಂಜಮ್ಮ ದೊರೆಗೆ ಅರಿಕೆ ಮಾಡಿದಳು. "ಈಗ ಅದು ನನ್ನ ಮನೆ ಹಜಾರದಲ್ಲಿದೆ. ತಾವು ಒಪ್ಪುವಿರಾದರೆ ಆ ವಿಗ್ರಹವನ್ನು ತಮಗೆ ಕಾಣಿಕೆಕೊಡಬೇಕೆಂದಿರುವೆನು."

"ಅಗತ್ಯವಾಗಿ ಸ್ವೀಕರಿಸುವೆನು. ನನಗಿನ್ನು ಜೀವಂತಳಾದ ರೇವಕ್ಕನ ಮೋರೆಯನ್ನು ನೋಡುವ ಭಾಗ್ಯವಿಲ್ಲ. ಬೆಳಿಗ್ಗೆ ಹಾಸಿಗೆಯಿಂದ ಎದ್ದ ಮೇಲೆ, ರೇವಕ್ಕನ ವಿಗ್ರಹವನ್ನು ನೋಡಿ ಮನದಳವನ್ನು ಆರಿಸಿಕೊಳ್ಳುವೆನು."

ಎಂದು ಮಾರ್ನುಡಿದ ಹೊನ್ನಹಳ್ಳಿಯ ದೊರೆ. ಆತನ ಹೃದಯದಲ್ಲಿ ಈಗ ಒಲವಿನ ಚಿಲುಮೆ ಚಿಮ್ಮುತ್ತಿದೆಯೆಂಬುದು ನಂಜಮ್ಮನಿಗೆ ಅರಿವಾಯಿತು. ಅವಳು "ನನ್ನ ಮಂದಿರಕ್ಕೆ ಪ್ರಭುಗಳು ದಯಮಾಡಿಸಬೇಕು." ಎಂದು ಅರಸನನ್ನು ಆಮಂತ್ರಿಸಿದಳು.

ದೊರೆ ನಂಜಮ್ಮನನ್ನು ಹಿಂಬಾಲಿಸಿದ. ಹನುಮಣ್ಣ, ವೀರಣ್ಣ, ಮಂಜಕ್ಕ ಮೊದಲಾದವರು ಸಾಂತಣ್ಣನ ಸಂಗಡ ತೆರಳಿದರು. ನಂಜಮ್ಮ ಅವರನ್ನೆಲ್ಲಾ ತನ್ನ ಮನೆಗೆ ಕರೆದೊಯ್ದು ಹಜಾರದಲ್ಲಿ ಉಚಿತ ಪೀಠಗಳ ಮೇಲೆ ಕುಳ್ಳಿರಿಸಿದಳು. ಅವರ ಮುಂದೆ ನೀಲಿ ಬಣ್ಣದ ಒಂದು ಪರದೆಯಿದ್ದಿತು. ಅವಳು ಅರಸನನ್ನು ಉದ್ದೇಶಿಸಿ, "ಆ ಪರದೆಯಾಚೆ ರಾಣಿಯ ವಿಗ್ರಹವಿದೆ. ಆ ಪ್ರತಿಮೆಯನ್ನು ನೋಡಿದಾಗ ರಾಣಿ ಜೀವಂತಳಾಗಿರುವಳೋ ಎಂದು ಭಾಸವಾಗುವುದು. ನಾನೀಗ ಪರದೆಯನ್ನು ಓಸರಿಸುತ್ತೇನೆ. ಆದರೆ ವಿಗ್ರಹವನ್ನು ತಾವು ಮುಟ್ಟಕೂಡದು." ಎಂದು ನುಡಿದಳು.

ನಂಜಮ್ಮ ಪರದೆಯನ್ನು ಎಳೆಯತೊಡಗಿದಳು. ಎಲ್ಲರೂ ಕೌತುಕ ದೃಷ್ಟಿಯಿಂದ ಪರದೆಯ ಕಡೆ ನೋಡುತ್ತಿದ್ದರು. ಈಗ ವಿಗ್ರಹ ಅವರ ಕಣ್ಣುಗಳಿಗೆ ತೋರಿತು. ಅದು ಆಳೆತ್ತರವಾಗಿತ್ತು. ಹಾಲುಗಲ್ಲಿನ ಪೀಠದ ಮೇಲೆ ಪ್ರತಿಮೆಯನ್ನು ಅಳವಡಿಸಲಾಗಿತ್ತು. ನೋಡುವವರಿಗೆ ಅದು ಜೀವಂತ ವ್ಯಕ್ತಿಯಾಗಿರುವುದು ಎಂದು ತೋರಿತು. ಸಾಂತಣ್ಣ ತನ್ನ ಪೀಠದಿಂದ ಎದ್ದು ಎರಡು ಹಜ್ಜೆ ಮುಂದೆ ಹೋಗಿ ವಿಗ್ರಹವನ್ನು ದಿಟ್ಟಿಸತೊಡಗಿದ. ಆತನ ಕಣ್ಣುಗಳಿಂದ ಧಾರಾಕಾರವಾಗಿ ಕಂಬನಿಯ ಹೊನಲು ಹರಿಯಿತು.

"ವಿಗ್ರಹ ಹೇಗಿದೆ ಒಡೆಯರೇ?" ನಂಜಮ್ಮ ಅರಸನನ್ನು ಪ್ರಶ್ನಿಸಿದಳು.

"ವಿಗ್ರಹ ಜೀವಂತ ರೇವಕ್ಕನಂತೆಯೇ ಇರುವುದು. ಅಂದು ವಿಚಾರಣೆಯ ದಿನ ಆಕೆ ತೊಟ್ಟಿದ್ದ ಸೀರೆಯನ್ನೇ ವಿಗ್ರಹಕ್ಕೆ ಸುತ್ತಲಾಗಿದೆ. ಅಂದು ತೊಟ್ಟಿದ್ದ ಆಭರಣಗಳೇ ಮೈಮೇಲಿವೆ. ಆದರೆ ಆಕಾರ ಮಾತ್ರ ಸ್ವಲ್ಪ ವ್ಯತ್ಯಾಸಹೊಂದಿದೆ. ಮೊಗದ ಚರ್ಮ ಸ್ವಲ್ಪ ಸುಕ್ಕುಗಟ್ಟಿದೆ. ತಲೆಯಲ್ಲಿ ಕೂದಲು ಒಂದೊಂದು ನರೆತಿದೆ. ಈ ವಿಗ್ರಹವನ್ನು ಕಾಣುವಾಗ ರಾಣಿಯೇ ನನ್ನ ಮುಂದೆ ಬಂದು ನಿಂತಂತೆ ಭಾಸವಾಗುವುದು. ಇದು ಕನಸಿನಂತೆ ಅನಿಸುವುದು."

"ಒಡೆಯರೇ, ನಾನು ಇಂದ್ರಜಾಲವನ್ನು ಬಲ್ಲೆ. ಈ ವಿಗ್ರಹ ಪೀಠದಿಂದ ಇಳಿದು ಬಂದು ತಮ್ಮ ಪಾದಗಳಿಗೆ ಎರಗುವಂತೆ ಮಾಡಬಲ್ಲೆ!"

"ನಿಜವೇ?" ಎಲ್ಲರೂ ವಿಸ್ಮಯದಿಂದ ನಂಜಮ್ಮನ ಮೋರೆಯನ್ನು ನೋಡಿದರು.

"ನೀನು ಪೀಠದಿಂದ ಇಳಿದು ಬಂದು ದೊರೆಗಳ ಪಾದಗಳಿಗೆ ನಮಸ್ಕರಿಸು." ಎಂದು ನಂಜಮ್ಮ ವಿಗ್ರಹಕ್ಕೆ ಆಜ್ಞಾಪಿಸಿದಳು.

ಅದೇನು ಸೋಜಿಗ! ಅಲ್ಲಿದ್ದವರು ತಮ್ಮ ಕಣ್ಣುಗಳನ್ನೇ ನಂಬಲಾರರಾದರೂ ವಿಗ್ರಹ ಪೀಠವನ್ನು ಬಿಟ್ಟು ಕೆಳಗಿಳಿಯಿತು! ಮುಂದೆ ಅಡಿಗಳನ್ನಿರಿಸ ತೊಡಗಿತು! ಬಂದು, ಸಾಂತಣ್ಣನ ಪಾದಗಳಿಗೆ ನಮಸ್ಕರಿಸಿತು! ಬೆರಗುವಟ್ಟ ಸಾಂತಣ್ಣ ತೋಳುಗಳನ್ನು ಚಾಚಿ, ಅಡಿಗಳಿಗೆರಗಿದ ವಿಗ್ರಹವನ್ನು ಹಿಡಿದು ಮೇಲೆತ್ತಲು ಪ್ರಯತ್ನಿಸಿದ. ಅದು ಶಿಲೆಯಾಗಿರಲಿಲ್ಲ. ಅದು ರಕ್ತ ಮಾಂಸ ಚರ್ಮಗಳಿಂದ ಕೂಡಿದ ಮಾನವ ವಿಗ್ರಹ! ಅವನ ರಾಣಿ ರೇವಕ್ಕನೇ ಪುನರ್ಜನ್ಮವನ್ನು ತಳೆದುಬಂದಿದ್ದಳು!

"ಇದು ವಿಗ್ರಹವಲ್ಲ; ಜೀವಂತಳಾದ ರೇವಕ್ಕ!" ಅರಸನು ವಿಸ್ಮಯ ಸಂತೋಷಗಳು ಬೆರೆತ ಉದ್ಗಾರವನ್ನೆತ್ತಿದ. "ನಂಜಮ್ಮ, ನೀನು ರಾಣಿ ಪುತ್ರಶೋಕದಿಂದ ಸ್ವರ್ಗ ಸೇರಿದಳೆಂದು ಹೇಳಿದೆಯಲ್ಲವೇ? ಅವಳು ಈಗ ಹೇಗೆ ಜೀವಂತಳಾದಳು! ನಾನು ಕನಸಿನಲ್ಲಿ ರಾಣಿಯನ್ನ ನೋಡುತ್ತಿರುವೆನೇ?"

"ಪ್ರಭು, ಇದು ಕನಸಲ್ಲ. ದಿಟವಾಗಿದೆ." ನಂಜಮ್ಮ ಅರಸನ ಪಾದಗಳಿಗೆರಗಿ ಅವನ ಸಂದೇಹವನ್ನು ಪರಿಹರಿಸಲು ಉದ್ಯುಕ್ತಳಾದಳು. "ರಾಣಿ

ಪುತ್ರಶೋಕದಿಂದ ಸ್ವರ್ಗ ಸೇರಲಿಲ್ಲ. ಅವರು ವೈಮುರೆತರು. ಅವರು ಸ್ವರ್ಗವನ್ನು ಸೇರಿದರೆಂದು ತಮಗೆ ಅರುಹಿದರೆ, ತಾವು ಮಾಡಿದ ಪ್ರಮಾದದ ಅರಿವು ತಮಗಾಗಬಹುದು; ವಿವೇಕ ಉದಯಿಸಬಹುದೆಂದು ನಾನು ಬಗೆದೆ. ರಾಣಿ ಸ್ವರ್ಗ ಸೇರಿದರೆಂಬ ಸುಳ್ಳು ಸುದ್ದಿಯನ್ನು ತಮ್ಮ ಕಿವಿಗಳಿಗೆ ಹಾಕಿದೆ. ರಾಣಿಯವರನ್ನು ಗೋಪ್ಯವಾಗಿ ನನ್ನ ಮಂದಿರದಲ್ಲಿ ಅಡಗಿಸಿ ಪೋಷಿಸಿದೆ. ತಾವು ಪಶ್ಚಾತ್ತಾಪಾಗ್ನಿಯಲ್ಲಿ ಬೆಂದು ಪುನೀತರಾದಾಗ, ರಾಣಿಯವರನ್ನು ತಮ್ಮ ಸನ್ನಿಧಿಗೆ ಒಪ್ಪಿಸೋಣವೆಂದು ನಿರ್ಧರಿಸಿದೆ. ಆ ಮಂಗಳ ಮುಹೂರ್ತ ಈಗ ಬಂತು!"

"ರಾಣಿ, ನಾನು ಅಪರಾಧಿ. ನಾನು ನಿನಗೆ ನೀಡಿದ ಬವಣೆಗಳನ್ನು ಆಲೋಚಿಸುವಾಗ ಮನ್ನಿಸೆಂದು ನಿನ್ನನ್ನು ಬೇಡಲು ನನಗೆ ಬಾಯಿ ಬರುವುದಿಲ್ಲ. ಪತಿದ್ರೋಹಿಯೆಂದು ನಿನ್ನ ಮೇಲೆ ದೋಷಾರೋಪಣೆ ಮಾಡಿದ ನಾನು ಕ್ಷಮಿಸೆಂದು ಯಾವ ರೀತಿ ಬೇಡಲಿ! ಆದರೂ ನಿನ್ನ ಮನಸ್ಸು ದೊಡ್ಡದು. ನನ್ನ ಎಲ್ಲಾ ತಪ್ಪುಗಳನ್ನು ಮನ್ನಿಸುವಿಯೆಂಬ ಭರವಸೆ ನನಗಿದೆ."

ಎಂದು ನುಡಿಯುತ್ತಾ ಅರಸನು ರಾಣಿಯ ಅಡಿಗಳಿಗೆರಗಲು ಅನುವಾದ. ಆದರೆ ರಾಣಿ ಪತಿಯನ್ನು ಹಿಡಿದೆತ್ತುತ್ತಾ "ಪ್ರಭು, ನೀವು ನನಗೆರಗಬಾರದು. ನಾನು ನಿಮ್ಮ ಪ್ರಜೆ; ನಿಮ್ಮ ನೆರಳು. ಸರ್ವ ಕಷ್ಟಗಳನ್ನೂ ಸಂತಾಪಗಳನ್ನೂ ತಾಳಿಕೊಳ್ಳುವ ಶಕ್ತಿಯನ್ನು ದೇವರು ಹೆಣ್ಣಿಗೆ ಕರುಣಿಸಿದ್ದಾನೆ." ಎಂದು ಕಂಬನಿ ಸುರಿಸಿದಳು.

"ರಾಣಿ, ಇದು ಅಳುವ ಸಮಯವಲ್ಲ." ನಂಜಮ್ಮನ ಕೊರಳಿಂದ ಮಾತು ಹೊಮ್ಮಿತು: "ನಿನ್ನ ಪ್ರತಿಬಿಂಬದಂತಿರುವ ಮಗಳನ್ನು ನೋಡು; ನಿನ್ನ ಭಾವಿ ಅಳಿಯಂದಿರನ್ನು ನೋಡು. ಮಗಳೇ, ತಾಯಿಯಡಿಗಳಿಗೆ ವಂದಿಸು."

ಮಂಜಕ್ಕ ತಾಯಿಗೆ ನಮಸ್ಕರಿಸಿದಳು. ರಾಣಿ ಮಗಳನ್ನು ಹಿಡಿದೆತ್ತಿದಳು; ಕೂದಲನ್ನು ನೇವರಿಸಿದಳು; ಕೆನ್ನೆಗಳನ್ನು ಸವರಿದಳು; ಮೈಕೈಗಳನ್ನು ತಡವಿದಳು. ಹದಿನೈದು ವರ್ಷಗಳಿಂದ ರಾಣಿಯ ಹೃದಯದಲ್ಲಿ ಮಡುವಾಗಿ ನಿಂತಿದ್ದ ಮಮತೆಯೆಲ್ಲ ಕಟ್ಟೆಯೊಡೆದು ಹೊನಲಾಗಿ ಹರಿಯಿತು. ಆ ತೊರೆಯಲ್ಲಿ ಮಂಜಕ್ಕ ಕೊಚ್ಚಿಹೋದಳು!

"ರಾಣಿ, ನಾನು ಮತ್ಸರ ವಿದ್ವೇಷಗಳಿಗೆ ಆಗರವೆನಿಸಿದ ಹಾವಿನ

ಹುತ್ತವಾಗಿದ್ದೆ. ಆ ಹಾವುಗಳು ನನಗೆ ಆಪ್ತರೆನಿಸಿದವರನ್ನೆಲ್ಲ ಕಡಿದು ಗಾಸಿಗೊಳಿಸಿದುವು; ನನ್ನ ಮಗನನ್ನು ಇಲ್ಲವಾಗಿಸಿದುವು; ರಾಣಿಯನ್ನು ದುಃಖದ ಮಡುವಿನಲ್ಲಿ ದೂಡಿದುವು!" ಪಶ್ಚಾತ್ತಾಪದಿಂದ ಬೆಂದ ಅರಸನ ಹೃದಯದಿಂದ ನುಡಿಗಳು ಹೊಮ್ಮಿದುವು. "ನಾನು ಹಾವಿನ ಹುತ್ತ; ಕೃಪಣ ಸರ್ಪಗಳು ವಾಸವಾಗಿರುವ ಹುತ್ತ!"

"ಪ್ರಭು, ಹಳೆಯ ಹುಣ್ಣನ್ನು ಕೆದಕಬೇಡಿ." ವೀರಣ್ಣ ಮುಂದೆ ಬಂದು ಉಸುರಿದ. "ರಾಣಿಯವರ ಹದಿನೈದು ವರ್ಷಗಳ ತಪಸ್ಸಿನ ದಿವ್ಯಾಗ್ನಿ ತಮ್ಮ ಹೃದಯದಲ್ಲಿದ್ದ ಹಾವುಗಳನ್ನೆಲ್ಲಾ ಸುಟ್ಟು ಬೂದಿಮಾಡಿವೆ! ಆ ಹುತ್ತದಲ್ಲಿ ಸರ್ಪಗಳು ಕಾಯುತ್ತಿದ್ದ ಪ್ರೇಮ ವಾತ್ಸಲ್ಯಗಳೆಂಬ ರತ್ನಗಳು ಮಾತ್ರ ಈಗ ಉಳಿದಿವೆ."

"ಹೌದು, ರಾಣಿಯ ತಪಸ್ಸು ನಿನ್ನನ್ನು ಉದ್ಧರಿಸಿತು." ಹನುಮಣ್ಣ ದಂಡನಾಯಕನ ನುಡಿಯನ್ನು ಅನುಮೋದಿಸಿದ. "ಅಲ್ಲದೆ ಆಕೆಯ ತಪಃ ಪ್ರಭಾವದಿಂದ ನಮ್ಮೆಲ್ಲರ ಬಾಳ್ವೆಗಳು ನಂದನಗಳಾದುವು!"

